# ಕನ್ನಡ ದಿನಪತ್ರಿಕೆಗಳಲ್ಲಿ
# ಅನ್ಯ ಭಾಷೆ ಬಳಕೆ

ಮಾಸ್ತರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಪ್ರಬಂಧ

ಸಂಶೋಧಕ
ಶಂಕ್ರಪ್ಪ

ಮಾರ್ಗದರ್ಶಕರು
ಡಾ. ಡಿ. ಪಾಂಡುರಂಗಬಾಬು
ಪ್ರಾಧ್ಯಪಕರು






ಭಾಷಾ ನಿಕಾಯ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೮

# ಕನ್ನಡ ದಿನಪತ್ರಿಕೆಗಳಲ್ಲಿ
# ಅನ್ಯ ಭಾಷೆ ಬಳಕೆ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಪ್ರಬಂಧ




ಸಂಶೋಧಕ
**ಶಂಕ್ರಪ್ಪ**



ಮಾರ್ಗದರ್ಶಕರು
**ಡಾ.ಡಿ.ಪಾಂಡುರಂಗಬಾಬು**
ಪ್ರಾಧ್ಯಾಪಕರು



ಭಾಷಾ ನಿಕಾಯ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ - ೫೮೩ ೨೭೬.
೨೦೦೮

# ಪ್ರಮಾಣ ಪತ್ರ

ಕನ್ನಡ ದಿನಪತ್ರಿಕೆಗಳಲ್ಲಿ ಅನ್ಯ ಭಾಷಾ ಬಳಕೆ ಎಂಬ ವಿಷಯ ಕುರಿತ ಸಂಪ್ರಬಂಧವನ್ನು ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ.ಡಿ.ಪಾಂಡುರಂಗಬಾಬು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಂಪ್ರಬಂಧದ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :



**ಶಂಕ್ರಪ್ಪ**
ಸಂಶೋಧಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ – ೫೮೩ ೨೭೬.

# ದೃಢೀಕರಣ ಪತ್ರ

ಶಂಕ್ರಪ್ಪ ಇವರು ಕನ್ನಡ ದಿನಪತ್ರಿಕೆಗಳಲ್ಲಿ ಅನ್ಯಭಾಷೆ ಬಳಕೆ ಎಂಬ ವಿಷಯ ಕುರಿತ ಸಂಪ್ರಬಂಧವನ್ನು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಸಾದರಪಡಿಸುತ್ತಿರುವ ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೮-೦೯-೨೦೦೫

**ಡಾ.ಡಿ.ಪಾಂಡುರಂಗಬಾಬು**
ಮಾರ್ಗದರ್ಶಕರು,
ಅಧ್ಯಯನಾಂಗದ ನಿರ್ದೇಶಕರು
ಮತ್ತು ಪ್ರವಾಚರು,
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ – ೫೮೩ ೨೭೬.

# ಕೃತಜ್ಞತೆಗಳು

ಎಂ.ಫಿಲ್ ಪದವಿಗಾಗಿ ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಮಾನ್ಯ ಕುಲಪತಿಗಳಾದ ಡಾ.ಎ.ಮುರುಗೆಪ್ಪ ಅವರಿಗೆ, ಮಾನ್ಯ ಕುಲಸಚಿವರಾದ ಡಾ.ಇ.ಚಿ.ಬೋರಲಿಂಗಯ್ಯ ಅವರಿಗೆ, ವಿಶ್ರಾಂತ ಕುಲಪತಿಗಳಾದ ಡಾ.ಕೆ.ವಿ.ನಾರಾಯಣ ಅವರಿಗೂ ಕಾರ್ಯಭಾರದ ಒತ್ತಡದ ಮಧ್ಯದಲ್ಲಿಯೂ ಸೂಕ್ತ ಸಲಹೆ ಹಾಗೂ ಮಾರ್ಗದರ್ಶನ ಮಾಡಿದ ಅಧ್ಯಯನಾಂಗದ ನಿರ್ದೇಶಕರು, ನನ್ನ ಮಾರ್ಗದರ್ಶಕರೂ ಹಾಗೂ ಪ್ರವಾಚಕರಾದ ಡಾ.ಡಿ.ಪಾಂಡುರಂಗಬಾಬು ಅವರಿಗೆ ಹೃದಯ ಪೂರ್ವಕ ಕೃತಜ್ಞತೆಗಳು.

ನನ್ನ ಅಧ್ಯಯನಕ್ಕೆ ಅಡಿಗಡಿಗೆ ಪ್ರೋತ್ಸಾಹ, ಸೂಕ್ತವಾದ ಸಲಹೆ ನೀಡುವುದರ ಮೂಲಕ ಆತ್ಮಸ್ಥೈರ್ಯ ತುಂಬಿದ ಕನ್ನಡ ಭಾಷಾಧ್ಯಯನ ವಿಭಾಗದ ಮುಖ್ಯಸ್ಥರೂ ಹಾಗೂ ಪ್ರವಾಚಕರಾದ ಡಾ.ಪಿ.ಮಹಾದೇವಯ್ಯ ಅವರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಹಲವು ಬಾರಿ ಸೂಕ್ತ ಸಲಹೆ ನೀಡಿದ ಭಾಷಾಧ್ಯಯನ ವಿಭಾಗದ ಪ್ರವಾಚಕರುಗಳಾದ ಡಾ.ಅಶೋಕಕುಮಾರ ರಂಜೇರಿ ಅವರಿಗೂ, ಡಾ.ಸಾಂಬಮೂರ್ತಿ ಅವರಿಗೂ ನನ್ನ ತುಂಬು ಮನಸ್ಸಿನ ಕೃತಜ್ಞತೆಗಳು.

ಅಧ್ಯಯನಕ್ಕೆ ಪ್ರೋತ್ಸಾಹವನ್ನಿತ್ತ ಪೂಜ್ಯ ತಂದೆಯವರಾದ ಶ್ರೀ ಮಲ್ಲಪ್ಪ, ತಾಯಿ ಶ್ರೀಮತಿ ಸತ್ಯಮ್ಮ ಅವರಿಗೂ, ಸಹೋದರ ಶ್ರೀ ಬಸವರಾಜ, ಸಹೋದರಿಯರಾದ ಶ್ರೀಮತಿ ಲಕ್ಷ್ಮಿ ದೊಡ್ಡಪ್ಪ, ಕು.ರೂಪಾ ಅವರಿಗೂ, ಅಳಿಯ ಶ್ರೀ ಕಿರಣಕುಮಾರ ಹಾಗೂ ಗೆಳತಿ ವಿಜಯಲಕ್ಷ್ಮಿ ಅವರಿಗೂ ಹಾಗೂ ಗೆಳೆಯ ಶ್ರೀ ಶಿವಾನಂದ ಬಡಿಗೇರ, ಸಹೋದರ ಡಾ॥ಶರಣಪ್ಪ ಗುರಿಕಾರ, ಶ್ರೀಮತಿ ಉಮಾ ಗುರಿಕಾರ ಅವರಿಗೂ ಕೃತಜ್ಞತೆಗಳು.

ಅಧ್ಯಯನಕ್ಕೆ ಅನುಕೂಲ ಮಾಡಿ ಕೊಟ್ಟ ಸಿಂಧನೂರಿನ ಸಂಕೇತ ಕಾಲೇಜ್ ಆಫ್ ಮ್ಯಾನೇಜ್‌ಮೆಂಟ್‌ನ ಅಧ್ಯಕ್ಷರಾದ ಶ್ರೀ ಎಸ್.ಬಸವರಾಜ ಅವರಿಗೂ, ಸಹೋದ್ಯೋಗಿ ಮಿತ್ರರಾದ ಶ್ರೀ ಪ್ರಕಾಶ ಅವರಿಗೂ, ಶ್ರೀ ಕಲಿಗಣನಾಥ ಗುಡದೂರು ಹಾಗೂ ಶ್ರೀ

ಬಸವರಾಜ ತಡಕಲ್ ಅವರಿಗೂ ಕೃತಜ್ಞತೆಗಳು. ನನ್ನ ಬೆನ್ನು ತಟ್ಟಿ ಪ್ರೋತ್ಸಾಹ ನೀಡಿದ ಹಿರಿಯರಾದ ಶ್ರೀ ಶಂಕ್ರಯ್ಯಸ್ವಾಮಿ ಮಠದ ಪಾಮನಕೆಲ್ಲೂರು, ಸಿಂಧನೂರಿನ ರಾಯಚೂರು ಸುದ್ದಿಬಿಂಬ ದಿನಪತ್ರಿಕೆಯ ಸಂಪಾದಕ ಡಿ.ಹೆಚ್.ಕಂಬಳಿ ಹಾಗೂ ಸಿಂಧನೂರಿನ ಎಲ್ಲಾ ಪತ್ರಕರ್ತರಿಗೂ ಹಾಗೂ ಜಿಲ್ಲಾ ಚುಟುಕು ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಶ್ರೀ ಬೀರಪ್ಪ ಶಂಭೋಜಿ ಅವರಿಗೂ ಹಾಗೂ ಸಿಂಧನೂರಿನ ತಾಲ್ಲೂಕ ಚುಟುಕು ಸಾಹಿತ್ಯ ಪರಿಷತ್ತಿನ ಬಳಗಕ್ಕೆ ಹಾಗೂ ಕೆಆರ್‌ಎಸ್‌ನ ಜಿಲ್ಲಾ ಅಧ್ಯಕ್ಷ ಎಚ್.ಎನ್.ಬಡಿಗೇರ್ ಅವರಿಗೂ ನನ್ನ ಕೃತಜ್ಞತೆಗಳು.

ಈ ಅಧ್ಯಯನದಲ್ಲಿ ನೆರವು, ಸಹಕಾರ ನೀಡಿದ ಆತ್ಮೀಯ ಗೆಳೆಯ, ಶಿಕ್ಷಕರಾದ ಶ್ರೀ ವೀರೇಶ ಗೋನವಾರ ಅವರಿಗೂ, ಅತ್ಯಂತ ಕಡಿಮೆ ಸಮಯದಲ್ಲಿ ಅಂದವಾಗಿ ಡಿ.ಟಿ.ಪಿ. ಮಾಡಿಕೊಟ್ಟ ಸಹೋದರಿ ಕು.ಪದ್ಮಾ ಹಬೀಬ ಅವರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.

ನನ್ನ ಸಹಪಾಠಿಗಳು ಹಾಗೂ ಉಪನ್ಯಾಸಕರಾದ ಶ್ರೀ ತಿಪ್ಪೇಶಪ್ಪ, ಶ್ರೀ ಶಂಕರ ಲಿಂಗಯ್ಯ, ಯರಿಯಪ್ಪ ಅವರಿಗೂ ಕೃತಜ್ಞತೆಗಳು. ಈ ಅಧ್ಯಯನದಲ್ಲಿ ಪತ್ರಿಕೆಗಳನ್ನು ನೀಡುವುದರ ಮೂಲಕ ಸಹಕರಿಸಿದ ನಮ್ಮ ವಿಭಾಗದ ಬೋಧಕೇತರ ಸಿಬ್ಬಂದಿಗಳಾದ ಶ್ರೀ ವೀರೇಶಪ್ಪ ಹಾಗೂ ಶ್ರೀ ಮಾರಯ್ಯ ಅವರಿಗೂ ಕೃತಜ್ಞತೆಗಳು. ಅಧ್ಯಯನ ಸಂದರ್ಭದಲ್ಲಿ ಸಹಕರಿಸಿದ ಸ್ನೇಹಿತರಾದ ಶ್ರೀ ಹುಲಿಯಪ್ಪ ಸಂಡೂರು ಅವರಿಗೂ, ಶ್ರೀ ಸೂಗಣ್ಣ, ಶ್ರೀ ತಿರುಪತಿ, ಶ್ರೀ ನಿರಂಜನ, ಶ್ರೀ ಸೀತಾರಾಮ್, ಶ್ರೀ ಈರಣ್ಣ ಹುರುಳಿ, ಶ್ರೀ ಗವಿಸಿದ್ಧಪ್ಪ, ಶ್ರೀ ಸುಧಾಕರ, ಡಾ.ಮಾರ್ಕಂಡಯ್ಯ ಹಂದ್ರಾಳ, ಶ್ರೀ ವೀರೇಶ ಉತ್ತಂಗಿ, ಶ್ರೀ ಶೇಖರಾಚಾರಿ, ಶ್ರೀ ಸುದೀಪ್, ಇಸ್ಮಾಯಿಲ್ ಜಬ್ಬೀರ್, ಶ್ರೀಮತಿ ಲಾವಣ್ಯ, ಕು.ಸೋಮಕ್ಕ, ಕು.ವೀರಾಕ್ಷಿ, ಕು.ವೆಲ್ಲೀಮಾ ಹಾಗೂ ಶ್ರೀ ವಾಗೀಶ್ ಮತ್ತು ಹಂಪಿ ವಿ.ವಿ. ಬಿ.ಸಿ.ಎಂ. ಹಾಸ್ಟೇಲಿನ ಎಲ್ಲಾ ಸ್ನೇಹಿತರಿಗೆ ಕೃತಜ್ಞತೆಗಳು.

– **ಶಂಕ್ರಪ್ಪ**

# ಪರಿವಿಡಿ

**ಅಧ್ಯಯನದ ಸ್ವರೂಪ :**

ಮನುಷ್ಯ ಮನುಷ್ಯನ ಮಧ್ಯೆ ಸಂವಹನ ಕ್ರಿಯೆಯನ್ನು ಉಂಟು ಮಾಡುವ ಸಾಧನಗಳೇ ಸಮೂಹ ಮಾಧ್ಯಮ. ಈ ಸಮೂಹ ಮಾಧ್ಯಮಗಳು ಕಳೆದ ಅರ್ಧ ಶತಮಾನದಲ್ಲಿ ದೊಡ್ಡ ಕ್ರಾಂತಿಯನ್ನೇ ಮಾಡಿವೆ. ಈ ಮೊದಲು ಇದ್ದ ಪತ್ರಿಕೆ ಜೊತೆಗೆ ರೇಡಿಯೋ, ಟೆಲಿವಿಷನ್, ಕಂಪ್ಯೂಟರ್ ಹಾಗೂ ಮೊಬೈಲ್ ಮಾನವರ ಬೌದ್ಧಿಕ ಆವಿಷ್ಕಾರದ ಕೂಸುಗಳಾಗಿದ್ದು, ಜಗತ್ತಿನ ಆಗು-ಹೋಗುಗಳನ್ನು ಜನರೆಡೆಗೆ ಬಹುಬೇಗನೆ ಕೊಂಡೊಯ್ಯುವುದರಿಂದ ಮಾಧ್ಯಮಗಳಿಲ್ಲದೇ ಜನರ ಬದುಕೇ ಇಲ್ಲ ಎನ್ನುವಂತಾಗಿದೆ. ಮಾಧ್ಯಮಗಳು ಜಗತ್ತನ್ನೇ ಜೇಬಿನಲ್ಲಿ ತಂದಿಟ್ಟಿವೆ (ಮೊಬೈಲ್). ಮಾನವರ ಬೌದ್ಧಿಕ ವಿಕಾಸ ಹಾಗೂ ಬದಲಾಗುವ ಜಗತ್ತಿಗನುಗುಣವಾಗಿ ಹೊಸ ಹೊಸ ಜ್ಞಾನದ ವಲಯಗಳನ್ನು ಅನಾವರಣಗೊಳಿಸಿವೆ.

ಮಾಧ್ಯಮಗಳು ಒಂದಲ್ಲ ಒಂದು ವಿಧದಲ್ಲಿ ಭಾಷೆಯನ್ನು ಬಳಸುತ್ತವೆ. ಭಾಷೆಯ ಎರಡು ರೂಪಗಳಾದ ಮಾತು ಮತ್ತು ಬರಹಗಳನ್ನು ಬೇರೆ ಬೇರೆ ರೀತಿಯಿಂದ ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುತ್ತಿವೆ. ಶಿಕ್ಷಣ, ಆಡಳಿತ ಹಾಗೂ ಮಾಧ್ಯಮ ವಲಯಗಳು ಭಾಷಾ ಬಳಕೆಯ ಪ್ರಮುಖ ವಲಯಗಳಾಗಿವೆ. ಪ್ರಭಾವಿ ಮಾಧ್ಯಮಗಳಲ್ಲಿ ಒಂದಾದ ಪತ್ರಿಕೆಗಳು ದಿನದಿಂದ ದಿನಕ್ಕೆ ತೀವ್ರವಾಗಿ ಬೆಳೆದು ಅದೊಂದು ಉದ್ಯಮವಾಗಿದೆ. ದೃಶ್ಯ ಮಾಧ್ಯಮವಾದ ಪತ್ರಿಕೆಯು ಸುದ್ದಿಗಳನ್ನು ಪ್ರಕಟಿಸಿ ಜನರಿಗೆ ತಲುಪಿಸುವುದರಿಂದ ಜನರು ಬೇಗನೆ ನಂಬುತ್ತಾರೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಜೆಗಳ ಪ್ರತಿನಿಧಿಯಾಗಿ ಪ್ರಜೆಗಳ ಸರ್ವಾಂಗೀಣ ಬೆಳವಣಿಗೆಯ ಜವಾಬ್ದಾರಿ ಪತ್ರಿಕೆಯ ಹೆಗಲ ಮೇಲಿದೆ. ಪತ್ರಿಕೆಯನ್ನು ಪ್ರಜಾಪ್ರಭುತ್ವದ ನಾಲ್ಕನೇ ಅಂಗವೆಂದು ಕರೆಯುತ್ತಾರೆ. ಪತ್ರಿಕೆಯ ಜವಾಬ್ದಾರಿ ಹಾಗೂ ಪತ್ರಿಕಾ ಸ್ವಾತಂತ್ರ್ಯ ಅತ್ಯಂತ ಮಹತ್ವದ್ದು. ಆದ್ದರಿಂದಲೇ ಬೇರೆ ಬೇರೆ ದೇಶಗಳನ್ನು ಒಳಗೊಂಡಂತೆ ಭಾರತದ ಸಂವಿಧಾನ ಹಾಗೂ ಸರ್ಕಾರ ವಿಶೇಷ ತಿದ್ದುಪಡಿ ಕಾಯ್ದೆಯಡಿಯಲ್ಲಿ ವಿಶೇಷ ಸ್ವಾತಂತ್ರ್ಯವನ್ನು ನೀಡಿವೆ. ಇದು ಪತ್ರಿಕೆಯ ಮಹತ್ವವನ್ನು ಸಾರುತ್ತದೆ.

ಪತ್ರಿಕೆಗಳು ತಮ್ಮ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿಭಾಯಿಸಲು ವಿವಿಧ ಕ್ಷೇತ್ರಗಳ ವಿಷಯಗಳನ್ನು ಒಳಗೊಂಡು ವರ್ಣರಂಜಿತವಾಗಿ ಓದುಗರನ್ನು ಆಕರ್ಷಿಸಲು ವಿವಿಧ ವಿನ್ಯಾಸದಲ್ಲಿ ಪ್ರಕಟವಾಗುತ್ತಿವೆ. ಕಲೆ, ಸಾಹಿತ್ಯ, ಸಂಗೀತ, ಸಂಸ್ಕೃತಿ, ಕ್ರೀಡೆ, ಸಿನೇಮಾ ಮುಂತಾದ ಕ್ಷೇತ್ರಗಳ ಸುದ್ದಿಯನ್ನು ಕನ್ನಡ ದಿನಪತ್ರಿಕೆಗಳು ಒಳಗೊಂಡಿವೆ. ಈ ಎಲ್ಲಾ ಕ್ಷೇತ್ರದ ವಿಷಯಗಳು ಭಾಷೆಯ ಮೂಲಕವೇ ಜನರಿಗೆ ತಲುಪುತ್ತವೆ ಎಂಬುದನ್ನು ಮರೆಯುವಂತಿಲ್ಲ.

ಪತ್ರಿಕೆಗಳು ಸಾಮಾನ್ಯವಾಗಿ ಶಿಷ್ಟ ಮಾದರಿಯ ಕನ್ನಡ ಭಾಷೆಯನ್ನು

ಬಳಸಿಕೊಂಡರೂ ಜಾಗತೀಕರಣ, ಉದಾರೀಕರಣ, ಖಾಸಗೀಕರಣ, ಕೈಗಾರೀಕರಣ ಹಾಗೂ ನಗರೀಕರಣಗಳ ಪ್ರಭಾವದಿಂದಾಗಿ ಬದಲಾಗುವ ಜಗತ್ತಿಗನುಗುಣವಾಗಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವ ಹಿನ್ನೆಲೆಯಲ್ಲಿ ಪತ್ರಿಕಾ ಮಾಧ್ಯಮದ ಪದಕೋಶದಲ್ಲಿ ಪರಿಣಾಮಕಾರಿ ಪಲ್ಲಟ ಕಂಡು ಬಂದಿದೆ. ಕನ್ನಡ ಪದಕೋಶದ ಜೊತೆಗೆ ಸಂಸ್ಕೃತ, ಇಂಗ್ಲೀಷ್, ಪರ್ಸೋ, ಅರೆಬ್ಬಿಕ್, ಪಾರಸಿ, ಮರಾಠಿ ಹಾಗೂ ಹಿಂದಿ ಮತ್ತು ಅನ್ಯ ಪ್ರಾಂತ ಭಾಷೆಗಳು ಬಂದು ಸೇರಿಕೊಳ್ಳುತ್ತಿವೆ. ಪತ್ರಿಕೆಗಳ ಸಂಪಾದಕೀಯ ಕಾಲಂನಲ್ಲಿ ಹೆಚ್ಚಾಗಿ ಸಂಸ್ಕೃತ ಪದಗಳು ಬಳಕೆಯಾದರೆ, ಕ್ರೀಡಾ ಪುರವಣಿ, ವಾಣಿಜ್ಯ ಪುರವಣಿ ಹಾಗೂ ವ್ಯಂಗ್ಯ ಚಿತ್ರ (ಕಾರ್ಟೂನ್) ಕಾಲಂನಲ್ಲಿ ಹೆಚ್ಚಾಗಿ ಇಂಗ್ಲೀಷ್ ಭಾಷೆಯ ಪದಗಳು ಬಳಕೆಯಾಗುತ್ತವೆ. ವೈಚಾರಿಕ ಲೇಖನ, ಸುದ್ದಿ, ಶೀರ್ಷಿಕೆ, ಅಂಕಣಗಳಲ್ಲಿ ಪ್ರಮಾಣೀಕರಣದ ಕನ್ನಡದೊಂದಿಗೆ ಪರ್ಸೋ, ಅರೆಬ್ಬಿಕ್, ಪಾರಸಿ ಹಾಗೂ ಮರಾಠಿ ಪದಗಳು ಬಳಕೆಯಾಗುತ್ತವೆ.

ಇಂಗ್ಲೀಷ್ ಪದಗಳು ಪತ್ರಿಕೆಯಲ್ಲಿ ಬಳಕೆಯಾಗುವಾಗ ನಾಮಪದಗಳು ವ್ಯಂಜ್ಯನಾಂತ್ಯದೊಂದಿಗೆ ವಿಭಕ್ತಿ ಪ್ರತ್ಯಯ ಬಳಕೆಯಾಗುವುದು ಹಾಗೂ ಇಂಗ್ಲೀಷ್ ನಾಮಪದಗಳೊಂದಿಗೆ ಕನ್ನಡದ ಕ್ರಿಯಾಪದ ಬಳಕೆಯಾಗುವುದನ್ನು ಗಮನಿಸಿಬಹುದು. ಅದೇ ರೀತಿಯಾಗಿ ಅರೆಬ್ಬಿಕ್, ಹಿಂದಿ, ಪಾರಸಿ, ಮರಾಠಿ ಹಾಗೂ ಪೋರ್ಚುಗೀಸ್ ಪದಗಳು ಬಳಕೆಯಾಗುವಾಗ ಬಹುತೇಕ ಪದಗಳು ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಅ' ಕಾರಂತ್ಯವಾಗಿ ಇಲ್ಲವೇ 'ಇ' ಕಾರಂತ್ಯ, 'ಉ' ಕಾರಂತ್ಯದೊಂದಿಗೆ ಬಳಕೆಯಾದರೆ, ಇನ್ನು ಕೆಲವು ಪದಗಳು ದೀರ್ಘಾಕ್ಷರವನ್ನು ಕಳೆದುಕೊಂಡು ಹೃಸ್ವೀಕರಣದೊಂದಿಗೆ ಬಳಕೆಯಾಗುತ್ತವೆ.

ಅನ್ಯದೇಶಿ ಪದಗಳು ಕನ್ನಡ ಪದಕೋಶದಲ್ಲಿ ಬಳಕೆಯಾಗುವುದು ಒಂದೆಡೆ ಕನ್ನಡ ಪದಕೋಶದ ಕೊರತೆಯನ್ನು ತುಂಬುವುದಕ್ಕಾಗಿ, ಮತ್ತೊಂದೆಡೆ ಕೊರತೆ ಇಲ್ಲದಿದ್ದರೂ ಸಾಮಾಜಿಕ ಒತ್ತಡ ಹಾಗೂ ಬದಲಾಗುವ ಕಾಲಘಟ್ಟಕ್ಕನುಗುಣವಾಗಿ ಬಳಕೆಯಾಗುತ್ತವೆ. ಕನ್ನಡ ದಿನಪತ್ರಿಕೆಗಳು ಅನ್ಯ ಭಾಷಾ ಪದ ಸ್ವೀಕರಣದಿಂದ ಬಹುಭಾಷಿಕ ಸಂದರ್ಭವನ್ನು ಎದುರಿಸುತ್ತಲೇ ಓದುಗರನ್ನು ಆಕರ್ಷಿಸುತ್ತವೆ. ಇಂದಿನ ಕನ್ನಡ ಅದರಲ್ಲಿಯೂ ಬರಹದ ಕನ್ನಡದ ಸ್ವರೂಪವನ್ನು ಅರ್ಥ ಮಾಡಿಕೊಳ್ಳಲು ಕನ್ನಡ ದಿನಪತ್ರಿಕೆಗಳಲ್ಲಿ ಬಳಕೆಯಾಗುವ ಅನ್ಯ ಭಾಷಾ ಪದಗಳ ಮೂಲ, ಅರ್ಥ ಹಾಗೂ ಪ್ರಯೋಗದ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ಅಗತ್ಯವಿದೆ.

**ಅಧ್ಯಯನದ ಉದ್ದೇಶ :**

ಕನ್ನಡ ಭಾಷೆಯ ಬೆಳವಣಿಗೆಯನ್ನು ಚಾರಿತ್ರಿಕವಾಗಿ ಗಮನಿಸಿದಾಗ ಒಂದಲ್ಲ ಒಂದು ಕಾಲಘಟ್ಟದಲ್ಲಿ ಬೇರೆ ಭಾಷೆಯ ಪ್ರಭಾವ ಕನ್ನಡ ಭಾಷೆಯ ಮೇಲೆ ಆಗಿರುವುದು ಕಂಡು ಬರುತ್ತದೆ. ಇಂತಹ ಪ್ರಭಾವ ಒಂದೇ ಪ್ರಮಾಣದಲ್ಲಿ ಆಗಿದೆಯೇ ಎಂದು

ಹೇಳಲು ಸಾಧ್ಯವಿಲ್ಲ. ಕನ್ನಡ ಭಾಷೆಯ ರಚನೆ ಮತ್ತು ಬಳಕೆಯನ್ನು ಗಮನಿಸುವುದಾದರೆ ಸಂಸ್ಕೃತ ಭಾಷೆ ರಚನೆಯ ಹಿನ್ನೆಲೆಯಲ್ಲಿ ಪ್ರಭಾವ ಬೀರಿದರೆ; ಇಂಗ್ಲೀಷ್, ಉರ್ದು, ಪರ್ಷಿಯನ್, ಅರೆಬ್ಬಿಕ್, ಮರಾಠಿ ಹಾಗೂ ಪೋರ್ಚುಗೀಸ್ ಭಾಷೆಗಳು ಬಳಕೆ ಹಿನ್ನೆಲೆಯಲ್ಲಿ ಪ್ರಭಾವ ಬೀರಿರುವುದು ಎದ್ದು ಕಾಣುತ್ತದೆ. ಈ ನಿಟ್ಟಿನಲ್ಲಿ ಕನ್ನಡ ದಿನಪತ್ರಿಕೆಗಳಲ್ಲಿ ಅನ್ಯ ಭಾಷೆಯ ಬಳಕೆ ಯಾವ ಪ್ರಮಾಣದಲ್ಲಾಗಿದೆ, ಆ ಪದಗಳು ಯಾವ ಭಾಷೆಯ ಮೂಲದಿಂದ ಬಂದದ್ದು ಆ ಪದಗಳು ಯಾವ ಯಾವ ಅರ್ಥಗಳನ್ನು ಹೊಂದಿವೆ, ಬೇರೆ ಬೇರೆ ಭಾಷೆಯಲ್ಲಿ ಹೇಗೆ ಬಳಕೆಯಲ್ಲಿವೆ ಎಂಬುದರ ಜೊತೆಗೆ ಪತ್ರಿಕೆಯಲ್ಲಿ ಆ ಪದಗಳು ಯಾವ ಅರ್ಥದಲ್ಲಿ ಪ್ರಯೋಗವಾಗಿದೆ ಎಂಬುದನ್ನು ತಿಳಿದುಕೊಳ್ಳುವುದರ ಮೂಲಕ ಬರಹದ ಕನ್ನಡದ ಸ್ವರೂಪ ಹೇಗಿದೆ ಎಂಬುದನ್ನು ಚರ್ಚಿಸುವುದೇ ಅಧ್ಯಯನದ ಉದ್ದೇಶವಾಗಿದೆ.

ಜಾಗತೀಕರಣದ ಪ್ರಭಾವದಿಂದ ಕನ್ನಡ ದಿನಪತ್ರಿಕೆಗಳಲ್ಲಿ ಬಳಕೆಯಾಗಿರುವ ಭಾಷಾ ರಚನೆಯ ಪಲ್ಲಟವನ್ನು ಕುರಿತು ಚರ್ಚಿಸುವ ಜರೂರಿದೆ. ಸಾಮಾನ್ಯವಾಗಿ ಅನ್ಯ ಭಾಷಾ ಬಳಕೆ ವಿವಿಧ ಪತ್ರಿಕೆಗಳಲ್ಲಿ ಒಂದೇ ಪ್ರಮಾಣದಲ್ಲಾಗಿರದೇ ಆಯಾ ಪತ್ರಿಕೆಯ ಮನೋಧರ್ಮಕ್ಕನುಗುಣವಾಗಿ ಸಂಪಾದಕೀಯ, ಶೀರ್ಷಿಕೆ, ವಾಚಕರ ವಾಣಿ (ಓದುಗರ ಕಾಲಂ), ಅಂಕಣ, ವಾಣಿಜ್ಯ ಹಾಗೂ ಕ್ರೀಡೆ ಮೊದಲಾದವುಗಳನ್ನು ಒಳಗೊಂಡಂತೆ ಪದಗಳ ಬಳಕೆಯಲ್ಲಾಗುವ ವ್ಯತ್ಯಾಸವನ್ನು ಸಹ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಉದಾಹರಣೆಗೆ 'ಪ್ರಜಾವಾಣಿ' ಹಾಗೂ 'ಸಂಯುಕ್ತ ಕರ್ನಾಟಕ' ಪತ್ರಿಕೆಗಳಲ್ಲಿ ಇಂಗ್ಲೀಷ್ ಭಾಷೆಯ ಬಳಕೆ; 'ವಿಜಯ ಕರ್ನಾಟಕ,' 'ಕನ್ನಡಪ್ರಭ' ಹಾಗೂ 'ಉದಯವಾಣಿ'ಗಳಿಗೆ ಹೋಲಿಸಲಾಗಿ ಅತ್ಯಂತ ಕಡಿಮೆ ಎಂದು ಹೇಳಬಹುದು. ಹಾಗೆಯೇ ಉದಯವಾಣಿಯ ಭಾಷಾ ಬಳಕೆ ಹೆಚ್ಚಾಗಿ ಕರಾವಳಿ ಪ್ರಾಂತ್ಯದ್ದು ಎಂದು ಹೇಳಬಹುದು. ಈ ಹಿನ್ನೆಲೆಯಿಂದ ವಿವಿಧ ಪತ್ರಿಕೆಗಳಲ್ಲಿ ಅನ್ಯ ಭಾಷೆಯ ಬಳಕೆ ಯಾವ ಸ್ವರೂಪದಲ್ಲಿ ಬಳಕೆಯಾಗುತ್ತಿದೆ ಎಂಬುದನ್ನು ನಿದರ್ಶನ ಸಹಿತವಾಗಿ ಪ್ರಸ್ತುತ ಅಧ್ಯಯನದಲ್ಲಿ ವಿವರಿಸಲಾಗುವುದು.

**ಅಧ್ಯಯನದ ಮಿತಿ (ವ್ಯಾಪ್ತಿ) :**

ಮೇ-೧, ೨೦೦೮ ರಿಂದ ಜೂನ್-೭, ೨೦೦೮ ರವರೆಗಿನ ರಾಜ್ಯ ಮಟ್ಟದ ಕನ್ನಡ ದಿನಪತ್ರಿಕೆಗಳಾದ ಪ್ರಜಾವಾಣಿ, ಕನ್ನಡ ಪ್ರಭ, ಸಂಯುಕ್ತ ಕರ್ನಾಟಕ, ವಿಜಯ ಕರ್ನಾಟಕ ಹಾಗೂ ಉದಯವಾಣಿ ಹೊರಡಿಸುತ್ತಿರುವ ಪ್ರಾದೇಶಿಕ ಸಂಪುಟಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಪತ್ರಿಕೆಗಳಲ್ಲಿ ಪ್ರಕಟವಾಗುವ ಶೀರ್ಷಿಕೆ, ಅಂಕಣ, ಕ್ರೀಡಾ ಪುರವಣಿ, ವಾಣಿಜ್ಯ ಪುರವಣಿ, ವಾಚಕರ ವಾಣಿ (ಓದುಗರ ಕಾಲಂ) ಹಾಗೂ ವ್ಯಂಗ್ಯಚಿತ್ರಗಳಲ್ಲಿ (ಕಾರ್ಟೂನ್) ಬಳಕೆಯಾಗುವ ಅನ್ಯ ಭಾಷೆಯ ಪದಗಳ ಮೂಲ, ಅರ್ಥ ಹಾಗೂ ಆ ಪದಗಳ ಪ್ರಯೋಗಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ದಿನದಿಂದ ದಿನಕ್ಕೆ ಪತ್ರಿಕೆಗಳ ಸಂಖ್ಯೆ ಹೆಚ್ಚುವುದು ಹಳೆಯ ಪತ್ರಿಕೆಗಳ ಜೊತೆಗೆ ಹೊಸ ಪತ್ರಿಕೆಗಳು ಜನ್ಮತಾಳುವುದರ ಮೂಲಕ ಪತ್ರಿಕಾ ವ್ಯಾಪ್ತಿ ವಿಶಾಲವಾಗಿದೆ. ಅನೇಕ ಏಳು-ಬೀಳುಗಳ ಮಧ್ಯೆ ಪತ್ರಿಕೆಗಳು ಬೆಳೆದು ಅದೊಂದು ಉದ್ದಿಮೆಯಾಗಿ ಬೆಳೆದು ನಿಂತಿದೆ. ರಾಷ್ಟ್ರದ ಅಭಿವೃದ್ಧಿಯಲ್ಲಿ ಅದರಲ್ಲೂ ವಿಶೇಷವಾಗಿ ಪ್ರಜಾಪ್ರಭುತ್ವದಂತಹ ರಾಷ್ಟ್ರಗಳಲ್ಲಿ ಪತ್ರಿಕೆಗಳು ಮಹತ್ವದ ಪಾತ್ರವನ್ನು ನಿರ್ವಹಿಸುತ್ತವೆ. ಪ್ರಜಾಪ್ರಭುತ್ವದ ನಾಲ್ಕನೇ ಅಂಗವೆಂದು ಕರೆಯಿಸಿಕೊಂಡಿರುವ ಪತ್ರಿಕೆಯು ತನ್ನ ಅನೇಕ ಕರ್ತವ್ಯ ಮತ್ತು ಜವಾಬ್ದಾರಿ ಜೊತೆಗೆ ರಾಷ್ಟ್ರದ ಪ್ರಗತಿಗೆ ಕಾರಣವಾಗಿದೆ. ಪತ್ರಿಕೆಯನ್ನು ಹುಟ್ಟುಹಾಕಿ ನಡೆಸಿಕೊಂಡು ಬಂದವರ ಧೈರ್ಯ, ಸಾಹಸ ಹಾಗೂ ಅವರ ಪರಿಶ್ರಮವನ್ನು ಮೆಚ್ಚುವಂತಹದ್ದು. ಭಾಷೆಯ ಬೆಳವಣಿಗೆಯಲ್ಲಿಯೂ ಪತ್ರಿಕೆಯ ಕೊಡುಗೆ ಅಪಾರವಾದದ್ದು.

ಜಗತ್ತಿನಲ್ಲಿಯೇ ಪತ್ರಿಕೆಯನ್ನು ಮೊಟ್ಟ ಮೊದಲ ಬಾರಿಗೆ ಆರಂಭ ಮಾಡಿದವರು ಜರ್ಮನ್ನರು. ಈ ಕುರಿತು ಡಾ.ಡಿ.ವಿ. ನಾಯಕರು (೨೦೦೩) ಹೀಗೆ ಹೇಳಿದ್ದಾರೆ "೧೬೧೫ ರಲ್ಲಿ ಪ್ರಕಟವಾದ 'ಜರ್ಮನ್' ಪತ್ರಿಕೆಯು ಜಗತ್ತಿನ ಮೊದಲ ಪತ್ರಿಕೆ. ನಂತರ ೧೮ ನೆಯ ಶತಮಾನದಲ್ಲಿ ಕೈಗಾರಿಕಾ ಕ್ರಾಂತಿಯ ಪರಿಣಾಮದಿಂದಾಗಿ ಪ್ರಪಂಚದದಾದ್ಯಂತ ಅನೇಕ ಪತ್ರಿಕೆಗಳು ಆರಂಭಗೊಂಡವು"[೧] ಎಂದು ತಿಳಿಸುತ್ತಾರೆ.

ಭಾರತದಲ್ಲಿ ಪತ್ರಿಕೆಗಳ ಬೆಳವಣಿಗೆಯನ್ನು ಕುರಿತು "ಕ್ರಿಶ್ಚಿಯನ್ ಮಿಷನರಿಗಳು ತಮ್ಮ-ತಮ್ಮ ಮತ ಪ್ರಚಾರಕ್ಕಾಗಿ ಮುದ್ರಣ ಯಂತ್ರ ತಂದರು. ಮುಂದೆ ಅವರೇ ಭಾರತೀಯ ಭಾಷೆಗಳಲ್ಲಿ ಪತ್ರಿಕೆಗಳ ಹುಟ್ಟಿಗೆ ಕಾರಣರಾದರು ಎಂದು ಬಿ.ಎಸ್.ಚಂದ್ರಶೇಖರ (೨೦೦೩) ಅಭಿಪ್ರಾಯ ಪಡುತ್ತಾರೆ.

೧೭೮೦ ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಮಾಜಿ ಉದ್ಯೋಗಿ ಜೇಮ್ಸ್ ಅಗಸ್ಟಸ್ ಹಿಕ್ಕಿ 'The Bengal Gezette' ಎಂಬ ಪತ್ರಿಕೆಯನ್ನು ಪ್ರಕಟಿಸಿದನು"[೨]. ಇದು ಭಾರತದ ಮೊದಲ ಪತ್ರಿಕೆ. ಮುಂದೆ ದೇಶಿಯ ನಾಯಕರು ಭಾರತದ ವಿವಿಧ ಭಾಷೆಗಳಲ್ಲಿ ಪತ್ರಿಕೆಗಳನ್ನು ಆರಂಭ ಮಾಡಿದರು. ಹಾಗಾಗಿ ಜೇಮ್ಸ್ ಅಗಸ್ಟಸ್‌ಹಿಕ್ಕಿಯನ್ನು 'ಭಾರತೀಯ ಪತ್ರಿಕೋದ್ಯಮದ ಪಿತಾಮಹ' ಎಂದು ಕರೆಯಲಾಗುತ್ತದೆ.

ಕೈಗಾರಿಕಾ ಕ್ರಾಂತಿಯ ಪರಿಣಾಮದಿಂದಾಗಿ ೧೯ ನೇ ಶತಮಾನದಲ್ಲಿ ಕರ್ನಾಟಕದಲ್ಲೂ ಪತ್ರಿಕೋದ್ಯಮ ಹುಟ್ಟಿಕೊಂಡಿತು. ಡಾ.ಡಿ.ಬಿ.ನಾಯಕ (೨೦೦೩) 'ಸಮೂಹ ಮಾಧ್ಯಮಗಳು ಮತ್ತು ಸಮಾಜ' ಎನ್ನುವ ಪುಸ್ತಕದಲ್ಲಿ ಹೀಗೆ ಅಭಿಪ್ರಾಯ ಪಡುತ್ತಾರೆ. "ಸುಮಾರು ೧೮೪೨-೪೩ ರಲ್ಲಿ ಕ್ರೈಸ್ತ ಮಿಷನರಿಗಳು ತಮ್ಮ ಧಾರ್ಮಿಕ ಕಾರ್ಯಗಳಿಗೆ ಕರ್ನಾಟಕದಲ್ಲಿ ಕನ್ನಡ ಭಾಷೆಯ ಮುದ್ರಣ ಯಂತ್ರವನ್ನು ಬಳಕೆ ಮಾಡಿದರು. ನಂತರ ಸುಮಾರು ೧೮೪೩ ರಲ್ಲಿ 'ಮಂಗಳೂರು ಸಮಾಚಾರ' ಕನ್ನಡ ಭಾಷೆಯಲ್ಲಿ ಮುದ್ರಣಗೊಂಡಿತು. ಇದು ಕನ್ನಡದ ಮೊದಲ ಪತ್ರಿಕೆ. ಮುಂದೆ ಕೆಲವೇ

ವರ್ಷಗಳಲ್ಲಿ ಬೆಂಗಳೂರು, ಮಂಗಳೂರು ಹಾಗೂ ಬೆಳಗಾವಿಗಳಲ್ಲಿ ಮುದ್ರಣ ಯಂತ್ರಗಳನ್ನು ಸ್ಥಾಪಿಸಲಾಯಿತು"[೩].

ನಂತರ ಕನ್ನಡ ನಾಡಿನ ವಿದ್ವಾಂಸರಾದ ವೆಂಕಟಕೃಷ್ಣಯ್ಯ, ಡಿ.ವಿ.ಗುಂಡಪ್ಪ, ತಿ.ತಾ.ಶರ್ಮಾ, ಸಿದ್ಧವನಳ್ಳಿ ಕೃಷ್ಣಾ ಶರ್ಮಾ, ಮೊಹರೆ ಹನುಮಂತರಾಯ ಮುಂತಾದ ಪತ್ರಕರ್ತರು ಪತ್ರಿಕೆಯ ಪ್ರಕಟಣೆಯಲ್ಲಿ ತೊಡಗಿದರು. ನಂತರ ಕನ್ನಡ ಭಾಷೆಯಲ್ಲಿ ಪತ್ರಿಕೋದ್ಯಮ ಬೆಳೆದು ನಿಂತಿತು. ಕನ್ನಡ ಭಾಷೆಯ ಪತ್ರಿಕೆಗಳಾದ ತಾಯಿ ನಾಡು (೧೯೨೬) ಪ್ರಜಾಮತ (೧೯೩೧), ಸಂಯುಕ್ತ ಕರ್ನಾಟಕ (೧೯೩೩), ಜಯ ಕರ್ನಾಟಕ ಕನ್ನಡಪ್ರಭ, ವಿಜಯ ಕರ್ನಾಟಕ ಮೊದಲಾದವು ಪ್ರಕಟಗೊಳ್ಳುವುದರ ಮೂಲಕ ಪತ್ರಿಕೋದ್ಯಮಕ್ಕೆ ಪುಷ್ಠಿ ನೀಡಿದವು.

ಇತ್ತೀಚಿನ ದಿನಮಾನಗಳಲ್ಲಿ ಪತ್ರಿಕೆಯು ಒಂದು ಉದ್ಯಮವಾಗಿ ಬೆಳೆದು ನಿಂತಿರುವುದು ಮಾತ್ರವಲ್ಲದೇ, ಕನ್ನಡ ಭಾಷೆಯನ್ನು ಬೆಳೆಸುವ, ಬಲಪಡಿಸುವ ಪ್ರಭಾವಿ ಮಾಧ್ಯಮವಾಗಿದೆ. ಈ ಕುರಿತು ಹಿರಿಯ ವಿದ್ವಾಂಸರಾದ ಡಾ.ಸೋಮಶೇಖರಗೌಡ (೧೯೯೯) ಅವರು ಹೀಗೆ ಹೇಳುತ್ತಾರೆ. "ಕನ್ನಡ ಭಾಷೆ ಅತ್ಯಂತ ಸಮೃದ್ಧವಾಗಿ ಬಳಕೆಯಾಗುತ್ತಿರುವ ಯಾವುದಾದರೂ ಕ್ಷೇತ್ರ ಇದೆ ಎಂದಾದರೆ ಅದು ಪತ್ರಿಕೋದ್ಯಮ. ಕರ್ನಾಟಕದಲ್ಲಿ ಪತ್ರಿಕೋದ್ಯಮದ ಇತಿಹಾಸ ಕೆದಕಿದರೆ ಅದಕ್ಕೆ ಸುಮಾರು ೧೫೦ ವರ್ಷಗಳ ಚರಿತ್ರೆಯಿಲ್ಲ. ಆದರೆ ಪತ್ರಿಕೋದ್ಯಮದಲ್ಲಿ ಕಂಡು ಬರುವ ಆಧುನಿಕತೆಯ, ನಾಗರೀಕತೆಯ ನಂಟು ಯಾರೂ ಮೆಚ್ಚುವಂತಹದ್ದು. ಯಾವ ಬಗೆಯವು? ಯಾವ ಧೋರಣೆಯವು? ಯಾವ ಉದ್ದೇಶದವೂ? ಎಂಬ ವಿಚಾರ ಒತ್ತಟ್ಟಿಗಿರಲಿ ಇವೆಲ್ಲ ಕನ್ನಡದ ಬಗೆಗೆ ಕಾಳಜಿಯನ್ನುಳ್ಳವು. ಕನ್ನಡವನ್ನು ಕಟ್ಟಲು ಕಂಕಣಧಾರಿಯಾದವು ಎಂಬುದು ಸುಳ್ಳಲ್ಲ"[೪]. ಎಂಬ ಅಂಶ ವ್ಯಕ್ತವಾಗುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡ ಪತ್ರಿಕೆಗಳು ಕನ್ನಡ ಭಾಷೆಯನ್ನು ಬೆಳೆಸುವ ಬಲಪಡಿಸುವ ಪ್ರಭಾವಿ ಮಾಧ್ಯಮಗಳಾಗಿವೆ ಎಂದರೆ ತಪ್ಪಾಗದು.

ಕನ್ನಡ ಭಾಷೆಯ ದಿನಪತ್ರಿಕೆಗಳು ಪ್ರಸ್ತುತ ಸಂದರ್ಭದಲ್ಲಿಯೂ ಪ್ರಕಟಗೊಳ್ಳುತ್ತಲಿವೆ. ಈ ಪತ್ರಿಕೆಗಳಲ್ಲಿ ಬಳಕೆಯಾಗುವ ಭಾಷೆ ಪ್ರತ್ಯೇಕ ಭಾಷೆಯ ಪ್ರಭೇದವಾಗಿ ಗೋಚರಿಸುತ್ತದೆ. ಕನ್ನಡ ಪತ್ರಿಕೆಗಳು ಕನ್ನಡ ಭಾಷೆಯನ್ನು ನವನವೀನಗೊಳಿಸುವುದರ ಜೊತೆಗೆ ಕನ್ನಡ ಭಾಷೆಯನ್ನು ಬೆಳೆಸಿವೆ, ಬಲಪಡಿಸಲೂ ಕಾರಣವಾಗಿವೆ.

ಕನ್ನಡ ದಿನಪತ್ರಿಕೆಗಳಲ್ಲಿ ಭಾಷಾ ಬಳಕೆಯನ್ನು ಕುರಿತಂತೆ ಕೆಲವು ವಿದ್ವಾಂಸರ ಪುಸ್ತಕಗಳು, ಕೆಲವು ಬಿಡಿ ಲೇಖನಗಳು ಕಂಡು ಬಂದಿವೆಯೇ ಹೊರತು ಭಾಷೆಯ ಬೆಳವಣಿಗೆಯನ್ನು ಕುರಿತು ಸಮಗ್ರ ಅಧ್ಯಯನದ ಕಾರ್ಯ ಆಗಿಲ್ಲ ಎಂದೇ ಹೇಳಬಹುದು. ಇನ್ನೂ ದಿನಪತ್ರಿಕೆಗಳಲ್ಲಿ ಅನ್ಯ ಭಾಷೆಯ ಬಳಕೆಯನ್ನು ಕುರಿತಾದ ಅಧ್ಯಯನಗಳು

ಇಲ್ಲವೆಂದರೂ ತಪ್ಪಾಗಲಾರದು.

ಪತ್ರಿಕೆಯ ಭಾಷೆಯ ಬಗ್ಗೆ ಇದುವರೆಗೆ ನಡೆದಿರುವ ಅಧ್ಯಯನಗಳನ್ನು ಗಮನಿಸುವುದಾದರೆ, ಲೀಲಾವತಿ ಎಂ.ಎನ್.ರವರ ಅಪ್ರಕಟಿತ ಪಿ.ಎಚ್‌ಡಿ. ಮಹಾಪ್ರಬಂಧ 'ಲಾಂಗ್ವೇಜ್ ಆಫ್ ಹೆಡ್‌ಲೈನ್ಸ್ ಇನ್ ಕನ್ನಡ ಡೈಲೀಸ್' (೧೯೯೬ ಮೈಸೂರು ವಿಶ್ವವಿದ್ಯಾಲಯ) ಕನ್ನಡ ದಿನಪತ್ರಿಕೆಗಳಲ್ಲಿನ ತಲೆಬರಹಗಳ ವಿವಿಧ ಅಂಶಗಳನ್ನು ಆಧರಿಸಿ ಅಧ್ಯಯನ ನಡೆಸಲಾಗಿದೆ. ನಾಮಪದಯುಕ್ತ, ಕ್ರಿಯಾಪದಯುಕ್ತ ಹಲವು ಅಂಶಗಳ ತಲೆಬರಹ, ಬಹುಸಾಲಿನ ತಲೆಬರಹ, ತಲೆಬರಹಗಳಲ್ಲಿನ ಲೇಖನ ಚಿಹ್ನೆಗಳ ಬಳಕೆ, ಅಲಂಕಾರಿಕ ಮಾತುಗಳುಳ್ಳ ತಲೆಬರಹ ಹೀಗೆ ತಲೆಬರಹಗಳ ವಿವಿಧ ಅಂಶಗಳನ್ನು ಒಳಗೊಂಡಂತೆ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಡಾ.ಡಿ.ವಿ.ಗುಂಡಪ್ಪನವರು ಬರೆದ 'ವೃತ್ತ ಪತ್ರಿಕೆ' (೧೯೨೮) ಎಂಬ ಪುಸ್ತಕದಲ್ಲಿ ವೃತ್ತಪತ್ರಿಕೆಯ ಸ್ವರೂಪ, ಅದರ ಮಹತ್ವ ಹಾಗೂ ಕರ್ತವ್ಯಗಳನ್ನು ವಿವೇಚನೆ ಮಾಡುವುದರ ಮೂಲಕ ಪತ್ರಿಕಾ ಸ್ವಾತಂತ್ರ್ಯಕ್ಕಾಗಿ ಹಗಲಿರುಳು ಶ್ರಮಿಸಿರುವ ಅನುಭವವನ್ನು ಹೇಳಿಕೊಂಡಿದ್ದಾರೆ. ಕನ್ನಡ ಭಾಷಾಭಿವೃದ್ಧಿಯ ಚಿಂತನೆಗಳನ್ನು ಅವರ ಅನುಭವದ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ ಮತ್ತು ಪತ್ರಿಕೆಯ ಭಾಷೆ ಸರಳ, ಸ್ಪಷ್ಟವಾಗಿರಬೇಕೆಂದು ತಿಳಿಸಲಾಗಿದೆ. ಅಲ್ಲದೇ ಪತ್ರಿಕೆಗಳಲ್ಲಿ ಬಳಕೆಯಾಗುವ ಭಾಷೆ ಜನಸಾಮಾನ್ಯರಿಗೆ ಹತ್ತಿರವಾಗಿರಬೇಕು ಮುಂತಾದ ಸಲಹೆಗಳನ್ನು ಹೇಳಲಾಗಿದೆ.

ವೈ.ಎನ್. ಕೃಷ್ಣಮೂರ್ತಿಯವರು 'ಇದುಸುದ್ದಿ–ಇದುಸುದ್ದಿ' (೧೯೮೫) ಎಂಬ ಪುಸ್ತಕದಲ್ಲಿ ವೃತ್ತಪತ್ರಿಕೆಗಳ ಭಾಷಾ ಸ್ವರೂಪ, ತಲೆಬರಹದ ಭಾಷೆ, ವರದಿಗಳಲ್ಲಿ ಕನ್ನಡ ಭಾಷೆಯ ಬಳಕೆಯನ್ನು ಕುರಿತು ಆಕರ್ಷಕವಾಗಿರಬೇಕು, ಸರಳವಾಗಿರಬೇಕೆಂದು ತಿಳಿಸುತ್ತಾರೆ.

ಎಂ.ವಿ.ಕಾಮತ್‌ರವರು 'ವೃತ್ತಪತ್ರಿಕೋದ್ಯಮ' (೧೯೯೦) ಎಂಬ ಪುಸ್ತಕದಲ್ಲಿ ಪ್ರತಿಯೊಂದು ಸುದ್ದಿ ಪ್ರಕಟವಾಗುವುದಕ್ಕೆ ಅವರದೇಯಾದ ಭಾಷಾ ಬಳಕೆ ಅನಿವಾರ್ಯ. ಪತ್ರಿಕೆಗಳ ಮೂಲಕ ಕನ್ನಡ ಭಾಷೆಯನ್ನು ಹೇಗೆ ಉಳಿಸಿ ಬೆಳೆಸಬೇಕು ಎಂಬುದರ ಬಗ್ಗೆ ತಿಳಿಸುತ್ತಾರೆ.

ಪ್ರಜಾವಾಣಿಯ ಸಂಪಾಕದರಾದ ಪದ್ಮರಾಜ ದಂಡಾವತಿಯವರ 'ಪತ್ರಿಕಾ ಭಾಷೆ' (೨೦೦೩) ಎನ್ನುವ ಪುಸ್ತಕದಲ್ಲಿ "ಪತ್ರಕರ್ತನಾಗುವವನಿಗೆ ಭಾಷಾ ಜ್ಞಾನ ಬಹಳ ಮುಖ್ಯ. ಪತ್ರಕರ್ತನಿಗೆ ಭಾಷೆಯೇ ಮುಖ್ಯ ಸರಕು. ಆ ಭಾಷೆಯನ್ನು ಪತ್ರಕರ್ತ ಹೇಗೆ ಬಳಸಬೇಕು ಮತ್ತು ಹೇಗೆ ಬೆಳೆಸಬೇಕು" ಎಂಬುದರ ಬಗ್ಗೆ ಮಾಹಿತಿಯನ್ನು ನೀಡುತ್ತಾರೆ.

ಪತ್ರಿಕೆಯುಲ್ಲಿ ಅನ್ಯ ಭಾಷಾ ಪದ ಬಳಕೆ, ಭಾಷಾ ಸ್ಪಷ್ಟತೆ, ಹೊಸ ಪದಗಳ ಸೃಷ್ಟಿ ಸಂಕ್ಷಿಪ್ತ ರೂಪಗಳ ಬಳಕೆ ಪತ್ರಿಕೆಯ ಭಾಷೆ ಸಮರ್ಥವಾಗಿ, ಸತ್ವಯುತವಾಗಿ ಸುಂದರವಾಗಿರಬೇಕೆಂದು ಭಾಷೆಗೆ ಸಂಬಂಧಿಸಿದಂತೆ ಅನೇಕ ವಿಚಾರಗಳನ್ನು ತಿಳಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ಈ ಪುಸ್ತಕವು ಭಾಷೆಯ ದೃಷ್ಟಿಯಿಂದ ಮಹತ್ವದ್ದಾಗಿದೆ.

ಡಾ.ದೇವೇಂದ್ರಕುಮಾರ ಹಕಾರಿಯವರ 'ವೃತ್ತಪತ್ರಿಕೆ ವರದಿ ಲೇಖನ' (೧೯೮೫) ಎಂಬ ಪುಸ್ತಕದಲ್ಲಿ ಪತ್ರಿಕೆಯ ಭಾಷೆ, ಶೈಲಿ ಮುಖ್ಯ. ವರದಿಗಾರನಿಗೆ ಭಾಷಾ ಜ್ಞಾನದ ಅವಶ್ಯಕತೆ ಇದೆ. ಆಯಾವಲಯದ ಪಾರಿಭಾಷಿಕ ಪದಗಳ ತಿಳುವಳಿಕೆ ಮುಖ್ಯ ಎನ್ನುತ್ತಾರೆ.

ಇಕ್ಬಾಲ್ ಅಹ್ಮದ್‌ರವರು 'ಪತ್ರಿಕೋದ್ಯಮದ ಮೂಲತತ್ವಗಳು' (೨೦೦೩) ಎಂಬ ಪುಸ್ತಕದಲ್ಲಿ ಪಾರಿಭಾಷಿಕ ಪದಗಳ ಬಗ್ಗೆ ಸೂಕ್ತ ತಿಳುವಳಿಕೆ ನೀಡುವುದರ ಜೊತೆಗೆ ಆಕರ್ಷಕ ಸುದ್ದಿಯಲ್ಲಿ ಭಾಷೆಯ ಬಳಕೆಯನ್ನು ಕುರಿತು ಅಧ್ಯಯನ ಕೈಗೊಂಡಿದ್ದಾರೆ.

ಪದ್ಮಾರಾಜ ದಂಡಾವತಿಯವರು 'ರಿಪೋರ್ಟಿಂಗ್' (೨೦೦೪) ಎಂಬ ಪುಸ್ತಕದಲ್ಲಿ ಸುದ್ದಿ, ವರದಿಗಾರಿಕೆ, ಲೀಡ್, ಅಂಶಗಳನ್ನು ಕುರಿತ ಮಾಹಿತಿಯನ್ನು ನೀಡುವುದರ ಜೊತೆಗೆ ತಲೆಬರಹಗಳಲ್ಲಿ ಪದಬಳಕೆ ಹಾಗೂ ಭಾಷಾ ಬಳಕೆಯ ಮುಖ್ಯ ವಿಚಾರಗಳನ್ನು ತಿಳಿಸಿದ್ದಾರೆ.

ಅದೇ ರೀತಿಯಾಗಿ ಕರ್ನಾಟಕ ಮಾಧ್ಯಮ ಅಕಾಡೆಮಿ ಬೆಂಗಳೂರು ಅವರು ಪ್ರಕಟಿಸಿದ 'ಮಾಧ್ಯಮ ಪಾರಿಭಾಷಿಕ' (೨೦೦೪) ಎಂಬ ಪುಸ್ತಕವು ಪಾರಿಭಾಷಿಕ ಪದಗಳ ಬಗ್ಗೆ ತಿಳುವಳಿಕೆ ನೀಡುವುದರ ಜೊತೆಗೆ, ಕಾನೂನು, ನ್ಯಾಯಾಂಗ, ವಿದ್ಯುನ್ಮಾನ ಮಾಧ್ಯಮ, ಗಣಕಯಂತ್ರ, ಕುದುರೆಜೂಜು, ಕ್ರೀಡಾ ಸಂದರ್ಭದಲ್ಲಿ ಬಳಸಲಾದ ಪಾರಿಭಾಷಿಕ ಪದಗಳ ಸಂಗ್ರಹ ಮುಂತಾದವುಗಳ ಬಗ್ಗೆ ಸರಿಯಾದ ಮಾಹಿತಿಯನ್ನು ನೀಡುತ್ತದೆ. ಈ ನಿಟ್ಟಿನಲ್ಲಿ ಈ ಪುಸ್ತಕವು ಪಾರಿಭಾಷಿಕ ಪದಗಳ ಕೈಪಿಡಿಯಾಗಿದೆ.

ಡಾ.ಕೆ.ವಿ.ನಾರಾಯಣರವರು ಸಂಪಾದಿಸಿದ 'ದಿನದಿನ-೧' (೧೯೯೩) ಎಂಬ ಪುಸ್ತಕವು ಪತ್ರಿಕಾ ವಲಯದಲ್ಲಿ ಕನ್ನಡ ಭಾಷೆ ಹೇಗೆ ಸಮೃದ್ಧವಾಗಿ ಬಳಕೆಯಾಗುತ್ತದೆ, ಅದು ಹೇಗೆ ಹೊಸ ಹೊಸ ಪ್ರಯೋಗಗಳನ್ನು, ಪದಸೃಷ್ಟಿಗಳನ್ನು ಬಳಕೆ ಮಾಡುತ್ತದೆ ಎಂದು ತಿಳಿಸಿದರೆ, ಡಾ.ಸಾಂಬಮೂರ್ತಿಯವರು ಸಂಪಾದಿಸಿದ 'ದಿನದಿನ-೨' (೨೦೦೧) ಹಾಗೂ ಡಾ.ಪಿ.ಮಹಾದೇವಯ್ಯನವರು ಸಂಪಾದಿಸಿದ 'ದಿನದಿನ-೩' (೨೦೦೬) ಕೃತಿಗಳು ಪತ್ರಿಕಾ ವಲಯದಲ್ಲಿ ಹೊಸ ಪದಗಳ ಸೃಷ್ಟಿ ಹಾಗೂ ಅದರ ಬಳಕೆಯ ವಿಧಾನಗಳನ್ನು ಕುರಿತು ಚರ್ಚಿಸಲಾಗಿದೆ.

ಅದೇ ರೀತಿಯಾಗಿ ವಿಜಯ ಕರ್ನಾಟಕ ಸಂಪಾದಕರಾದ ವಿಶ್ವೇಶ್ವರಭಟ್‌ರವರ 'ತಲೆಬರಹ' (೨೦೦೧) ಎಂಬ ಪುಸ್ತಕವು ತಲೆಬರಹಗಳಲ್ಲಿ ಭಾಷೆ ಹೇಗೆ ಆಕರ್ಷಕವಾಗಿರಬೇಕು. ತಲೆಬರಹಗಳಲ್ಲಿನ ಭಾಷೆ ಸಮ್ಮೋಹನಗೊಳಿಸುವ ಸೂಜಿಗಲ್ಲಿನಂತಿರಬೇಕು, ಆಕರ್ಷಕವಾಗಿರಬೇಕು, ಒಟ್ಟು ಸುದ್ದಿಯ ತಿರುಳನ್ನು ಹೊಂದಿರಬೇಕು. ತಲೆಬರಹದಲ್ಲಿನ ಭಾಷೆ ಸರಳ, ಸ್ಪಷ್ಟವಾಗಿರಬೇಕೆಂದು ತಿಳಿಸಲಾಗಿದೆ.

ಡಾ.ಟಿ.ಸಿ.ಪೂರ್ಣಿಮಾರವರು ತಮ್ಮ ಪಿ.ಎಚ್‌ಡಿ. ಮಹಾಪ್ರಬಂಧ 'ಆಧುನಿಕ

ಸಂವಹನ ಮಾಧ್ಯಮಗಳು ಮತ್ತು ಕನ್ನಡದ ಅಭಿವೃದ್ಧಿ' (೨೦೦೧) ಎಂಬ ಕೃತಿಯಲ್ಲಿ ಆಧುನಿಕ ಸಮೂಹ ಮಾಧ್ಯಮಗಳ ಪರಿಣಾಮದಿಂದ ಭಾಷೆಯಲ್ಲಿ ಹೇಗೆ ಟಂಕೀಕರಣವಾಗುತ್ತದೆ, ಭಾಷಾಂತರ, ಅನ್ಯ ಭಾಷಾ ಸ್ವೀಕರಣ ಮತ್ತು ಭಾಷಾ ಮಿಶ್ರಣದಿಂದ ಕನ್ನಡ ಭಾಷೆಯ ವಲಯ ಹೇಗೆ ವಿಸ್ತೀರ್ಣಗೊಳ್ಳುತ್ತಿದೆ ಎಂಬುದನ್ನು ತಿಳಿಸುವುದರ ಜೊತೆಗೆ ಸಮೂಹ ಮಾಧ್ಯಮಗಳಲ್ಲಿ ಕನ್ನಡ ಭಾಷೆಯ ಅಭಿವೃದ್ಧಿಯ ಅಗತ್ಯತೆ ಮತ್ತು ಮಹತ್ವವನ್ನು ಚರ್ಚಿಸಲಾಗಿದೆ.

ಶ್ರೀನಿವಾಸ ಹಾವನೂರರು 'ಕನ್ನಡ ಪತ್ರಿಕಾಸೂಚಿ' (೨೦೦೪) ಎಂಬ ಗ್ರಂಥವನ್ನು ಹೊರತಂದಿದ್ದು ಕನ್ನಡ ದಿನಪತ್ರಿಕೆಗಳ ಹೆಸರುಗಳನ್ನು ಕಾಲಾನುಕ್ರಮದಲ್ಲಿ ಹೇಳಿದ್ದು ಸುದೀರ್ಘವಾಗಿ ಪ್ರಸ್ತಾವನೆಯನ್ನು ಬರೆಯಲಾಗಿದೆ.

ಅದೇ ರೀತಿಯಾಗಿ ಡಾ.ನಾಡಿಗ ಕೃಷ್ಣಮೂರ್ತಿಯವರ 'ಪತ್ರಿಕೋದ್ಯಮ' (೧೯೮೧). ಜೆ.ಎಂ. ರಾಜಶೇಖರರವರು ಸಂಪಾದಿಸಿರುವ 'ಪತ್ರಕರ್ತ–ಪತ್ರಿಕೋದ್ಯಮ' (೨೦೦೪). ಟಿ.ವೆಂಕಟರಮಣಯ್ಯನವರ 'ಪತ್ರಿಕೋದ್ಯಮ ವಾಙ್ಮಯ ಸೂಚಿ' (೧೯೮೮). ಡಾ.ಡಿ.ಬಿ.ನಾಯಕರ 'ಸಮೂಹ ಮಾಧ್ಯಮಗಳು ಮತ್ತು ಸಮಾಜ' (೨೦೦೩). ಸಂಶೋಧಕ ಸೂಗಣ್ಣ ಅವರು ಮಂಡಿಸಿದ ಎಂ.ಫಿಲ್ ಪ್ರಬಂಧ 'ಕನ್ನಡ ದಿನಪತ್ರಿಕೆಗಳಲ್ಲಿ ಕ್ರೀಡಾಪುಟದ ಭಾಷೆ' (೨೦೦೭) ಮುಂತಾದವುಗಳು ಪತ್ರಿಕೋದ್ಯಮದ ವಿಷಯ ಮತ್ತು ಭಾಷೆಗಳಿಗೆ ಸಂಬಂಧಿಸಿದ ಮಾಹಿತಿಯನ್ನು ನೀಡುವ ಪುಸ್ತಕಗಳಾಗಿವೆ.

**ಅಡಿಟಿಪ್ಪಣಿ :**

೧. ಡಾ.ಡಿ.ಬಿ.ನಾಯಕ. /ಸಂ. /೨೦೦೩./ ಸಮೂಹ ಮಾಧ್ಯಮಗಳು ಮತ್ತು ಸಮಾಜ/ ಪು. ೩೦.

೨. ಬಿ.ಎಸ್.ಚಂದ್ರಶೇಖರ /ಸಂ/೨೦೦೩/ಸಮೂಹ ಮಾಧ್ಯಮಗಳು/ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ/ ಪು.೭೮.

೩. ಡಾ.ಡಿ.ಬಿ.ನಾಯಕ /ಸಂ/ ೨೦೦೩/ ಸಮೂಹ ಮಾಧ್ಯಮಗಳು ಮತ್ತು ಸಮಾಜ/ ಪು. ೩೨.

೪. ಡಾ.ಸೋಮಶೇಖರಗೌಡ /ಸಂ/ ೧೯೯೯/

# ಅಧ್ಯಾಯ – ೩

## ಕನ್ನಡ ದಿನಪತ್ರಿಕೆಗಳಲ್ಲಿ ಅನ್ಯಭಾಷಾ ಪದಪ್ರಯೋಗ ಮತ್ತು ಬಳಕೆ

೩.೧. ಶೀರ್ಷಿಕೆಗಳಲ್ಲಿ ಅನ್ಯಭಾಷಾ ಪದಬಳಕೆ

೩.೨. ಅಂಕಣಗಳಲ್ಲಿ ಅನ್ಯಭಾಷಾ ಬಳಕೆ

೩.೩. ಕ್ರೀಡಾ ಪುರವಣಿಯಲ್ಲಿ ಅನ್ಯಭಾಷಾ ಬಳಕೆ

೩.೪. ವಾಚಕರ ವಾಣಿ (ಓದುಗರ ಕಾಲಂ) ನಲ್ಲಿ ಅನ್ಯಭಾಷಾ ಬಳಕೆ

೩.೫. ವ್ಯಂಗ್ಯಚಿತ್ರ(ಕಾರ್ಟೂನ್)ಗಳಲ್ಲಿ ಅನ್ಯಭಾಷಾ ಬಳಕೆ

೩.೬. ವ್ಯವಹಾರಿಕ (ವಾಣಿಜ್ಯ ಪುರವಣಿ) ವರದಿಗಳಲ್ಲಿ ಅನ್ಯಭಾಷಾ ಬಳಕೆ

**ಪ್ರಸ್ತಾವನೆ :**

ಕನ್ನಡ ದಿನಪತ್ರಿಕೆಗಳಲ್ಲಿ ಬಳಕೆಯಾಗಿರುವ ಅನ್ಯಭಾಷೆಯನ್ನು ಕುರಿತು ಗಮನಿಸುವಾಗ ಸಂಸ್ಕೃತ, ಇಂಗ್ಲೀಷ್, ಅರೆಬ್ಬಿಕ್, ಹಿಂದಿ, ಮರಾಠಿ ಪದಗಳು ಬಳಕೆಯಾದದ್ದು ಕಂಡು ಬರುತ್ತದೆ. ಅದರಲ್ಲಿಯೂ ಸಂಸ್ಕೃತ ಮತ್ತು ಇಂಗ್ಲೀಷ್ ಭಾಷೆಯ ಪದಗಳು ಹೇರಳವಾಗಿ ಬಳಕೆಯಾಗುತ್ತಿದ್ದು ಅರೆಬ್ಬಿಕ್, ಹಿಂದಿ, ಪಾರಸಿ, ಮರಾಠಿ ಪದಗಳ ಬಳಕೆ ಕಡಿಮೆ ಎಂದು ಹೇಳಬಹುದು. ಕನ್ನಡ ಪದಕೋಶ ಆಧುನೀಕರಣಕ್ಕಾಗಿ ಇಂಗ್ಲೀಷ್‌ನ್ನು ಪ್ರಮಾಣೀಕರಣಕ್ಕಾಗಿ ಸಂಸ್ಕೃತವನ್ನು ಅವಲಂಬಿಸಿರುವುದರಿಂದ ಆಡುಭಾಷೆಯಲ್ಲಿ ಇಂಗ್ಲೀಷ್‌ನ್ನು ಹೆಚ್ಚಾಗಿ ಬಳಸಿಕೊಂಡರೆ, ಬರಹದಲ್ಲಿ ಹೆಚ್ಚಾಗಿ ಸಂಸ್ಕೃತವನ್ನು ಬಳಸಿಕೊಂಡಿರುವುದರಿಂದ ಕನ್ನಡ ದಿನಪತ್ರಿಕೆಗಳಲ್ಲಿ ಕ್ರೀಡಾ ಪುರವಣಿ, ಕಾರ್ಟೂನ್, ವಾಣಿಜ್ಯ ಕಾಲಂಗಳನ್ನು ಹೊರತು ಪಡಿಸಿ ಸಂಪಾದಕೀಯ, ಶೀರ್ಷಿಕೆ, ವರದಿ, ಲೇಖನ, ವಾಚಕರ ಕಾಲಂ ಮುಂತಾದವುಗಳನ್ನು ಗಮನಿಸಿದಾಗ ಬಹುತೇಕ ಇಡೀ ಪತ್ರಿಕೆಗಳು ಸಂಸ್ಕೃತಮಯವಾಗಿರುವುದರಿಂದ ಕನ್ನಡ ದಿನಪತ್ರಿಕೆಗಳಲ್ಲಿ ಬಳಕೆಯಾಗುವ ಸಂಸ್ಕೃತ ಪದಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವ ಅಗತ್ಯವಿಲ್ಲ ಎನ್ನಿಸುತ್ತದೆ. ಈ ಹಿನ್ನೆಲೆಯಲ್ಲಿ ಸಂಸ್ಕೃತ, ಸಂಸ್ಕೃತ ಭಾಷೆಯ ಪದಗಳ ಮೂಲ, ಅರ್ಥ, ಪ್ರಯೋಗವನ್ನು ಕುರಿತು ಚರ್ಚಿಸುವುದಕ್ಕಿಂತ ಕನ್ನಡ ಬರಹಕ್ಕಾಗಿ ಸಂಸ್ಕೃತವನ್ನು ಅವಲಂಬಿಸಿರುವುದನ್ನು ಚರ್ಚಿಸುವುದು ಅಗತ್ಯವೆನಿಸುತ್ತದೆ.

"ಕನ್ನಡ ಬರಹದಲ್ಲಿ ಹೆಚ್ಚಾಗಿ ಸಂಸ್ಕೃತ ಪದಗಳನ್ನು ಸೇರಿಸಲು ನಾವು ಹಿಂಜರಿಯುವುದಿಲ್ಲ. ಹಾಗೆಯೇ ಸಂಸ್ಕೃತ ಪದಗಳನ್ನು ಹೆಚ್ಚು ಬಳಸುವುದು (ಬರಹದಲ್ಲಿ) ಸೂಕ್ತವೆಂದು ಹೇಳುತ್ತೇವೆ. ಇದಕ್ಕೆ ಕಾರಣಗಳನ್ನು ಹುಡುಕುವುದಾದರೆ ಒಂದು ಕನ್ನಡದಲ್ಲಿ ತಕ್ಕ ಪದಗಳಿಲ್ಲದೇ ಇರುವುದರಿಂದ ಹೀಗೆ ಸಂಸ್ಕೃತ ಪದಗಳನ್ನು ಬಳಸುತ್ತೇವೆ. ಎರಡನೆಯದಾಗಿ ಈಗಾಗಲೇ ಬಳಕೆಯಲ್ಲಿರುವ ಸಂಸ್ಕೃತ ಪದಗಳನ್ನೇ ಬಳಸುವುದರಿಂದ ಓದುವವರಿಗೆ ತೊಂದರೆಯಿಲ್ಲದೇ ಗೊತ್ತಾಗುತ್ತದೆ. ಮೂರನೆಯದಾಗಿ ಹೊಸ ಕನ್ನಡ ಪದಗಳನ್ನು ತಯಾರು ಮಾಡಲು ಆಗುವುದಿಲ್ಲ. ಹಾಗೆಯೇ ತಯಾರು ಮಾಡಿದರೂ ಅವುಗಳು ಓದುವವರೆಗೆ ಸರಿಯಾಗಿ ಓದುವವರೆಗೆ ಸರಿಯಾಗಿ ಅರ್ಥ ಗೊತ್ತಾಗುವುದಿಲ್ಲ. ನಾಲ್ಕನೆಯದಾಗಿ ಸಂಸ್ಕೃತ ಪದಗಳನ್ನು ಬಳಸುವುದರಿಂದ ಆ ಪದಗಳಿಂದ ಹುಟ್ಟಿದ ರೂಪಗಳನ್ನು ಬಳಸಲು ಅನುವಾಗುತ್ತದೆ. ಅದರಿಂದ ನಮಗೆ ಹೆಚ್ಚು ಪದಗಳು ದೊರೆಯುತ್ತವೆ. ಇದು ಕನ್ನಡ ಪದಗಳ ಬಳಕೆಯಿಂದ ಆಗುವುದಿಲ್ಲ. ಐದನೆಯದಾಗಿ ಸಂಸ್ಕೃತ ಪದಗಳಿಗೆ ಒಂದು ಬಗೆಯ ಸೊಬಗಿದೆ. ಕನ್ನಡದ ದೇಶಿಯ ಪದಗಳ ರೂಪ ಒಂದು ಕಡೆಯಿಂದ ಇನ್ನೊಂದು ಕಡೆಗೆ ಬದಲಾಗುವುದರಿಂದ ಅವುಗಳಲ್ಲಿ ಸರಿಯಾದುದ್ದನ್ನು ಹುಡುಕಿ ಬಳಸುವುದು ಆಗದ ಮಾತು. ಈ ಎಲ್ಲಾ ಬರವಣಿಗೆಯನ್ನು ಎಚ್ಚರಿಕೆಯಿಂದ

ಗಮನಿಸುವುದಾದರೆ ಅವೆಲ್ಲವೂ ದಿಟವಲ್ಲವೆಂಬುದು ಗೊತ್ತಾಗುತ್ತದೆ. ಎಲ್ಲರೂ ಹೇಗೆ ಮಾಡುತ್ತಿದ್ದಾರೋ ನಾವು ಹಾಗೆ ಮಾಡುತ್ತಿದ್ದೇವೆ ಎಂಬುದಂತೂ ನಿಜ. ಸಂಸ್ಕೃತ ಪದಗಳೊಡನೆ ಬೆರೆತು ಸಂಸ್ಕೃತ ಪದಗಳನ್ನು ಅವುಗಳ ಮೂಲ ರೂಪದಲ್ಲೇ ಉಳಿಸಿಕೊಂಡ ಕನ್ನಡವನ್ನು 'ಶುದ್ಧ' ಕನ್ನಡವೆಂದು ನಂಬಲಾಗಿದೆ. ಅಂದರೆ ಸಂಸ್ಕೃತ ಪದಗಳನ್ನು ಬಳಸುವುದರ ಜೊತೆಗೆ ಅವು ಹೇಗಿವೆಯೋ ಹಾಗೆ ಬಳಸಬೇಕೆಂಬ ಒತ್ತಾಯವನ್ನು ಹೇರಿಕೊಂಡಿದ್ದೇವೆ. ಅಂಕುಶ, ಜನುಮ, ಮೊಗ, ದಿಟ್ಟ, ಆಗಸ ಮುಂತಾದ ಪದಗಳನ್ನು ಬಳಸಲು ಹಿಂಜರಿಯುತ್ತೇವೆ. ಈ ಪದಗಳು ಕೇವಲ ಹಳೆಯ ಕವಿಗಳ ಕವಿತೆ, ಕತೆಗಳಲ್ಲಿ ಬಳಸಲ್ಪಡುತ್ತವೆ".[೧]

ಬರವಣಿಗೆಯಲ್ಲಿ ಬಳಸಬಹುದಾದ ಸಂಸ್ಕೃತ ಪದಗಳಿಗೆ ಬದಲಾಗಿ ಕನ್ನಡ ಪದಗಳನ್ನೇ ಬಳಸಬಹುದು. ಹಾಗೆಯೇ ಬಳಸದೇ ಇರುವುದರಿಂದ ಅನೇಕ ಕನ್ನಡ ಪದಗಳು ನಮ್ಮ ನೆನಪಿನಿಂದ ಜಾರಿ ಹೋಗುತ್ತಿವೆ ಎಂಬುದಕ್ಕೆ ದಿನಪತ್ರಿಕೆಗಳಲ್ಲಿ ಬಳಕೆಯಾದ ಪದಗಳ ಉದಾಹರಣೆಯನ್ನು ನೋಡಬಹುದು.

| | |
|---|---|
| ತ್ಯಜಿಸು | – (ಬಿಡು, ಬಿಟ್ಟುಕೊಡು, ತೊರೆ) |
| ವೈಫಲ್ಯ | – (ಸೋಲು) |
| ನೇತೃತ್ವ | – (ಮುಂದಾಳುತನ, ಕಣ್ಗಾವಲು) |
| ಅಂತಿಮ | – (ಕೊನೆ) |
| ವಿಳಂಬ | – (ತಡ) |
| ಸನ್ನಿಹಿತವಾಗು | – (ಹತ್ತಿರವಾಗು, ಹತ್ತಿರಬರು) |
| ಸ್ಫೋಟ | – (ಸಿಡಿತ) |
| ತಕ್ಷಣ | – (ಕೂಡಲೆ) |
| ಸ್ವೀಕರಿಸು | – (ಪಡೆದುಕೊಳ್ಳು) |
| ಸ್ಥಾಪಿಸು | – (ನೆಲೆಗೊಳಿಸು, ಇಡು) |
| ಸಾಕಾರಗೊಳ್ಳು | – (ಮೈದಳೆ ಕಾಣಿಸು) (ಕಾಣಿಸುವಂತಾಗು) |
| ತ್ಯಜಿಸು | – (ಬಿಡು, ಬಿಟ್ಟುಕೊಡು, ತೊರೆ) |
| ಅಭೂತಪೂರ್ವಕ | – (ಹಿಂದೆಂದೂ ಇಲ್ಲದ, ಈವರೆಗೆ ಇಲ್ಲದ, ಎಂದೂ ಕಾಣದ) |
| ಭೀತಿಪಡು | – (ಹೆದರು, ಬೆದರು) |
| ಸಹಮತ | – (ಒಪ್ಪಿಗೆ, ಒಪ್ಪಂದ) |
| ಉಕ್ತಿ | – (ಮಾತು, ನುಡಿ) |
| ವಿನೂತನ | – (ಹೊಸ) |

ಪರಂಪರಾಗತ – (ತಲೆಮಾರಿನಿಂದ ಬಂದ, ಹಿಂದಿನಿಂದಲೂ ಇರುವ)
ಸಮೀಪಿಸು – (ಹತ್ತಿರವಾಗು)
ಮಗ್ನನಾಗು – (ಮುಳುಗಿರು, ಮನಸ್ಸಿಟ್ಟಿರು)
ಘಟಿಸು – (ಆಗು, ನಡೆ)
ಇಚ್ಛಿಸು – (ಬಯಸು)
ನಿಯಂತ್ರಿಸು – (ಹಿಡಿತದಲ್ಲಿಡು)
ರಕ್ಷಿಡು – (ಕಾಪಾಡು, ಪೊರೆ)
ಪುನರುಚ್ಚರಿಸು – (ಮತ್ತೇ ಹೇಳು, ಮರಳಿ ನುಡಿ)

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಕನ್ನಡ ಪದಗಳನ್ನು ಬಳಸುವ ಸಾಧ್ಯತೆಗಳಿರುವ ಕಡೆಗೆಲ್ಲ ಸಂಸ್ಕೃತ ಪದಗಳನ್ನು ಬಳಸುತ್ತೇವೆ ಎಂಬುದು ಸಾಬೀತಾಗುತ್ತದೆ. ಬರವಣಿಗೆಯಲ್ಲಿ ಸಂಸ್ಕೃತದ ಪದಗಳನ್ನು ಬಳಸುವುದು ಸರಿಯೋ-ತಪ್ಪೋ ಎಂದು ಚರ್ಚಿಸುವುದಕ್ಕಿಂತ ನೂರಾರು ವರ್ಷಗಳಿಂದ ಸಂಸ್ಕೃತ ಪದಗಳು ಬಂದು ಕನ್ನಡದೊಂದಿಗೆ ಸೇರಿಕೊಳ್ಳುವುದು ಸಹಜ. ಹೀಗೆ ಬಂದು ಸೇರಿದ ಸಂಸ್ಕೃತ ಪದಗಳು ಕನ್ನಡದೊಂದಿಗೆ ಎರಡು ರೀತಿಯಲ್ಲಿ ಕಂಡು ಬಂದಿವೆ. ಒಂದು : ಕನ್ನಡ ಪದಗಳ ಜಾಗದಲ್ಲಿ ತಾವೇ ನೆಲೆಗೊಂಡಿರುವುದು, ಎರಡು : ಕನ್ನಡ ಪದಗಳನ್ನು ಹೊರದೂಡದಿದ್ದರೂ ಇವುಗಳ ಹರವನ್ನು ತಗ್ಗಿಸುವುದು ಉದಾಹರಣೆ: 'ಸಮಯ' ಬಂದು 'ಹೊತ್ತು' ಕಣ್ಮರೆಯಾಯಿತು. ಅದೇ ರೀತಿಯಾಗಿ 'ಅನ್ನ' ಬಂದು 'ಕೂಳು' ಎಂಬ ಪದ ಕಣ್ಮರೆಯಾಯಿತು. ಕನ್ನಡ ಪದಗಳು ತೆರೆಮರೆಗೆ ಸರಿಯುವುದು, ಚಲಾವಣೆಯಲ್ಲಿದ್ದರೂ ಮೈಕುಗ್ಗಿಸಿಕೊಂಡಿರುವುದು ಎಷ್ಟರ ಮಟ್ಟಿಗೆ ಸರಿ?

ಬರವಣಿಗೆಯಲ್ಲಿ ಸಂಸ್ಕೃತದ ಪದಗಳನ್ನು ಹೆಚ್ಚಾಗಿ ಬಳಸುವುದರಿಂದ ಇನ್ನೊಂದು ಬಗೆಯ ನೆರವು ಸಿಕ್ಕಂತಾಗಿದೆ. ಈಗಾಗಲೇ ಬಳಸಿರುವ ಪದಗಳನ್ನು ಮತ್ತೆ-ಮತ್ತೆ ಬಳಸುವಂತಾಗಿದೆ. ಉದಾಹರಣೆ : ಕಛೇರಿಗಳಲ್ಲಿ ಕೆಲಸ ಮಾಡುವವರು ತಮ್ಮ ಕಡತಗಳಲ್ಲಿ ಟಿಪ್ಪಣಿ ಬರೆಯುವುದನ್ನು ನೋಡಿದರೆ ಹೊಸ ಪದಗಳನ್ನು ಬಳಸದೇ ಬಳಸಿದ ಪದಗಳನ್ನೆ ಯಥಾವತ್ತಾಗಿ ನಕಲು ಮಾಡುತ್ತಾರೆ. ಇಂತಹ ಸಂದರ್ಭಗಳಲ್ಲಿ ನುಡಿ ಬಳಕೆಯಲ್ಲಿ ತನ್ನತನ ಎನ್ನುವುದು ಇರುವುದಿಲ್ಲ. ಇದ್ದರೂ ಕಡಿಮೆ. ಹೀಗೆ ಸಂಸ್ಕೃತ ಪದಗಳು ಸವೆದ ಹಾದಿಯ ವಾಕ್ಯಗಳನ್ನು ಕಟ್ಟಲು ನೆರವಾಗುತ್ತವೆ. ಅಪ್ಪಿತಪ್ಪಿ ಯಾರಾದರೂ ಕನ್ನಡ ಪದಗಳನ್ನು ಬಳಸಲು ಹೊರಟರೆ, ಕನ್ನಡ ಪದಗಳು ನೆನಪಿಗೆ ಬಾರದೇ ಹೋಗುತ್ತವೆ. ನೆನಪಿಗೆ ಬಂದ ಪದಗಳನ್ನು ಬಳಸಿ ವಾಕ್ಯಗಳನ್ನು ಕಟ್ಟಬೇಕಾದರೆ ಬೇರೆ ಬಗೆಯಲ್ಲಿ ಕಟ್ಟಬೇಕಾಗುತ್ತದೆ. ಬರವಣಿಗೆ ಕನ್ನಡ ಪದಗಳಲ್ಲಿ ಇರಬೇಕೆಂದು ಹೊರಟಾಗಲೇ ಈ ತೊಂದರೆ ಅನುಭವಕ್ಕೆ ಬರುತ್ತದೆ.

ಈ ಮೇಲಿನ ಮಾತುಗಳನ್ನು ಗಮನಿಸಿದಾಗ ಸಂಸ್ಕೃತ ಪದಗಳನ್ನು ಬಳಸಿ ಬರೆಯುವ ದಾರಿ ಸುಲಭವಾದರೆ, ಕನ್ನಡ ಪದಗಳನ್ನು ಬಳಸಿ ಬರೆಯುವ ಬರವಣಿಗೆ ಕಷ್ಟವಾದದ್ದು ಎಂಬುದಾಗಿ ತಿಳಿದು ಬರುತ್ತದೆ. ಬರವಣಿಗೆಯಲ್ಲಿ ಕನ್ನಡ ಪದಗಳನ್ನು ಬಳಸುವುದು ಕಷ್ಟವಾದರೂ ಈ ದಾರಿಯನ್ನೇ ಆಯ್ದುಕೊಳ್ಳುವುದು ಹೆಚ್ಚು ಸೂಕ್ತ. ಏಕೆಂದರೆ ಇದರಿಂದ ಕನ್ನಡವನ್ನು ಬರೆಯುವ ಬಗೆ ಬದಲಾಗುತ್ತದೆ. ಜೊತೆಗೆ ತೆರೆಯ ಹಿಂದೆ ಇದ್ದ ಕನ್ನಡ ಪದಗಳು ಮುಂದೆ ಬರುತ್ತವೆ. ಆ ಮೂಲಕ ತಮ್ಮ ನಿಜವಾದ ಬಣ್ಣದಲ್ಲಿ ಬಳಕೆಯಾಗುತ್ತವೆ. ಅಂದರೆ ಬರವಣಿಗೆಯಲ್ಲಿ ಸಂಸ್ಕೃತ ಪದಗಳನ್ನು ಹೊರಗಿಟ್ಟು ಬರೀ ಕನ್ನಡ ಪದಗಳನ್ನು ಬಳಸಬೇಕೆಂದೇನೂ ಇಲ್ಲ. ಕನ್ನಡ ಪದಗಳನ್ನು ಹೆಚ್ಚಾಗಿ ಬಳಸುವುದರ ಜೊತೆಗೆ ಸಂಸ್ಕೃತ ಪದಗಳನ್ನು ಬಳಸಿದರೂ ಅವು ಕನ್ನಡದ ಜಾಯಮಾನಕ್ಕೆ ಹೊಂದಿಕೊಳ್ಳುವಂತೆ ಮಾಡಿ ಆ ಮೂಲಕ ಬಳಸುವುದು ಹೆಚ್ಚು ಸೂಕ್ತ. ಈ ರೀತಿ ಮಾಡುವುದರಿಂದ ಮಾತಿನ ಕನ್ನಡ ಮತ್ತು ಬರಹದ ಕನ್ನಡ ಬೇರೆ-ಬೇರೆಯಾಗಿರುವುದನ್ನು ತಪ್ಪಿಸಬಹುದು. ಒಂದು ವೇಳೆ ಎರಡು ಒಂದೇಯಾಗದಿದ್ದರೂ ಅವೆರಡರ ಮಧ್ಯೆ ದೊಡ್ಡ ವ್ಯತ್ಯಾಸವಿಲ್ಲದಂತೆ ಮಾಡಬಹುದು. ಆ ಮೂಲಕ ಮಾತನಾಡುವ ಕನ್ನಡಿಗರು ಕನ್ನಡ ಬರಹವನ್ನು ಓದಲು ಹಿಂಜರಿಯುವುದನ್ನು ತಪ್ಪಿಸಿದಂತಾಗುತ್ತದೆ.

**೩.೧. ಶೀರ್ಷಿಕೆಗಳಲ್ಲಿ ಅನ್ಯಭಾಷಾ ಪದಬಳಕೆ**

ಪತ್ರಿಕೆಯ ವರದಿ, ಲೇಖನಗಳ ಮೇಲ್ಭಾಗದಲ್ಲಿರುವ ತಲೆಬರಹವನ್ನು ಶೀರ್ಷಿಕೆ ಎಂದು ಕರೆಯಲಾಗುತ್ತದೆ. ಈ ಶೀರ್ಷಿಕೆಯ ಅಕ್ಷರಗಳ ಗಾತ್ರ ಸಾಮಾನ್ಯ ಅಕ್ಷರಗಳಿಗಿಂತ ಅಂದರೆ ಆರಂಭಿಕ ಟಿಪ್ಪಣಿ (Lead), ವರದಿಗಳಲ್ಲಿ ಪ್ರಕಟವಾದ ಅಕ್ಷರಗಳ ಗಾತ್ರಕ್ಕಿಂತ ದೊಡ್ಡದಾಗಿರುತ್ತವೆ. ಶೀರ್ಷಿಕೆಗಳು ಸಾಮಾನ್ಯವಾಗಿ ಆಕರ್ಷಕವಾಗಿದ್ದು, ಓದುಗರನ್ನು ತನ್ನೆಡೆಗೆ ಸೆಳೆದುಕೊಳ್ಳುವ ಗುಣವನ್ನು ಹೊಂದಿರುತ್ತವೆ. ಅಲ್ಲದೇ ವಿಷಯ ಗ್ರಹಿಕೆಗೆ ಅನುಕೂಲವಾಗುವ ಹಾಗೆಯೇ ಶೀರ್ಷಿಕೆಗಳನ್ನು ರೂಪಿಸಲಾಗುತ್ತದೆ. ಈ ಕುರಿತು ಡಾ.ಕೆ.ವಿ.ನಾರಾಯಣ 'ಕನ್ನಡ ಜಗತ್ತು-ಅರ್ಧ ಶತಮಾನ' (೨೦೦೭) ಎಂಬ ಪುಸ್ತಕದಲ್ಲಿ ಈ ರೀತಿ ಅಭಿಪ್ರಾಯ ಪಡುತ್ತಾರೆ. "ಪತ್ರಿಕೆಗಳಲ್ಲಿ ಬಳಕೆಯಾಗುವ ಶೀರ್ಷಿಕೆಯ ಭಾಷೆ ನಾವು ಸಾಮಾನ್ಯವಾಗಿ ಗ್ರಹಿಸುವಂತೆ ಕೇವಲ ಮಾಹಿತಿ ಪ್ರದಾನವಾಗಿರುವುದಿಲ್ಲ. ಓದುವವರ ಆಸಕ್ತಿ, ಬಿಡುವು, ಗ್ರಹಿಕೆಯ ಸಾಮರ್ಥ್ಯ ಇವುಗಳನ್ನು ಅವಲಂಬಿಸಿ ತನ್ನ ಭಾಷೆಯ ಸ್ವರೂಪದಲ್ಲಿ ತನ್ನದೇ ಆದ ಹೊಸ ವಿನ್ಯಾಸವನ್ನು ನಿರ್ಮಿಸಿಕೊಳ್ಳುತ್ತದೆ. ಕನ್ನಡದ ಪತ್ರಿಕೆಗಳು ಕಳೆದ ೫೦ ವರ್ಷಗಳಲ್ಲಿ ಈ ನಿಟ್ಟಿನಲ್ಲಿ ಅಗಾಧ ಪ್ರಮಾಣದ ಪ್ರಯೋಗಗಳನ್ನು ಮಾಡಿವೆ"[೧].

ಪತ್ರಿಕೆಯ ಜೀವಂತಿಕೆಯನ್ನು ಆಕರ್ಷಕವಾದ ತಲೆಬರಹಗಳಲ್ಲಿ ಕಾಣಬಹುದಾಗಿದೆ. ಶೀರ್ಷಿಕೆಗಳು ಪತ್ರಿಕೆಯ ಜೀವಾಳವಾಗಿರುತ್ತವೆ. ವೈ.ಎನ್.ಕೃಷ್ಣಮೂರ್ತಿ (೧೯೮೫) "ಸುದ್ದಿಯ ಸಾರವನ್ನು ತಲೆಬರಹ ಹೇಳಬೇಕು. ತಲೆಬರಹ ಚಿಕ್ಕದಾಗಿರಬೇಕು,

ಆಕರ್ಷಕವಾಗಿರಬೇಕು, ಕುತೂಹಲ ಕೆರಳಿಸುವಂತಿರಬೇಕು, ಅದು ಸುದ್ದಿಯ ಕೈಮರವಾಗಬೇಕು"[3] ಎಂದು ಅಭಿಪ್ರಾಯ ಪಡುತ್ತಾರೆ. ಅಂದರೆ ಸೂಕ್ತ ವರದಿ, ಲೇಖನಗಳಿಗೆ ಸೂಕ್ತವಾದ ಶೀರ್ಷಿಕೆ ಕಳಶವಿದ್ದಂತೆ ಎಂಬುದು ಅರ್ಥವಾಗುತ್ತದೆ.

ಕನ್ನಡ ದಿನಪತ್ರಿಕೆಗಳಲ್ಲಿನ ಶೀರ್ಷಿಕೆಗಳಲ್ಲಿ ಬಳಕೆಯಾದ ಅನ್ಯ ಭಾಷಾ ಪದಗಳನ್ನು ಗಮನಿಸುವುದಾದರೆ ಕನ್ನಡ ಪದಗಳ ಜೊತೆಗೆ ಇಂಗ್ಲೀಷ್, ಸಂಸ್ಕೃತ, ಪರ್ಸೋ, ಅರೆಬ್ಬಿಕ್, ಹಿಂದಿ, ಮರಾಠಿ ಹಾಗೂ ಪಾರಸಿ ಪದಗಳು ಬಳಕೆಯಾಗಿರುವುದು ಕಂಡು ಬರುತ್ತದೆ. ಸಾಮಾನ್ಯವಾಗಿ ವಾಣಿಜ್ಯ, ಆಟೋಟ, ವೈದ್ಯಕೀಯ ಸುದ್ದಿಗಳಲ್ಲಿ ಬಳಕೆಯಾಗುವ ಶೀರ್ಷಿಕೆಗಳಲ್ಲಿ ಕನ್ನಡ–ಇಂಗ್ಲೀಷ್ ಮಿಶ್ರಿತ ರೂಪಗಳು ಕಂಡು ಬಂದರೆ, ವರದಿ ವ್ಯಾಖ್ಯಾನ, ವೈಚಾರಿಕ ಸುದ್ದಿಗಳು, ಗಂಭೀರ ಬರಹ, ವಿಮರ್ಶೆ, ಶೀರ್ಷಿಕೆಗಳಲ್ಲಿ ಸಂಸ್ಕೃತ ಪದಗಳು ಹೆಚ್ಚಾಗಿ ಕಂಡು ಬರುತ್ತವೆ. ಅದೇ ರೀತಿಯಾಗಿ ಇನ್ನು ಕೆಲವು ಸಂದರ್ಭಗಳಲ್ಲಿ ಅರೆಬ್ಬಿಕ್, ಹಿಂದಿ, ಮರಾಠಿ ಹಾಗೂ ಪಾರಸಿ ಪದಗಳು ಶೀರ್ಷಿಕೆಗಳಲ್ಲಿ ಬಳಕೆಯಾಗುತ್ತವೆ. ಕೆಲವೊಮ್ಮೆ ಶೀರ್ಷಿಕೆಗಳಲ್ಲಿ ಕನ್ನಡದ ಪ್ರಭೇದ ಪದಗಳು (ಹಾಸ್ಯ ಮತ್ತು ಲಘು ಬರಹಗಳಲ್ಲಿ) ಬಳಕೆಯಾಗುತ್ತವೆ.

ಉದಾಹರಣೆ : (ವಿಜಯ ಕರ್ನಾಟಕ, ಜೂನ್ ೧, ೨೦೦೮) ಬಂದೈತಿ ಎಂಬ ಕ್ರಿಯಾಪದ ಶೀರ್ಷಿಕೆಯಲ್ಲಿ ಈ ರೀತಿ ಬಳಕೆಯಾಗಿದೆ. 'ರೋಹಿಣಿ ಮಳೆ ಬಂದೈತಿ : ರಿಯಾಯ್ತಿ ಬೀಜ ಎಲ್ಲೈತಿ' (ಇಲ್ಲಿ ಎಲ್ಲೈತಿ ಎಂಬುದು ಕೂಡ ಪ್ರಾದೇಶಿಕ ಭಾಷೆ) ಅದೇ ರೀತಿಯಾಗಿ (ಜೂನ್ ೧, ೨೦೦೮ ವಿಜಯ ಕರ್ನಾಟಕ) 'ನಾನೊಲ್ಲೆ–ನೀನೊಲ್ಲೆ' ಈ ಪದಗಳು ಶೀರ್ಷಿಕೆಯಲ್ಲಿ ಹೀಗೆ ಪ್ರಯೋಗವಾಗಿವೆ. 'ಸ್ಪೀಕರ್ ಆಗಲು ನಾನೊಲ್ಲೆ–ನೀನೊಲ್ಲೆ'. (ಜೂನ್ ೩, ೨೦೦೮ ವಿಜಯ ಕರ್ನಾಟಕ) 'ಏ ಶೆಟ್ಟರ್ ಸೆ ಮೈ ಬಾತ್ ಕರ್ತಾ ಹೂಂ' ಎಂಬುದನ್ನು ಗಮನಿಸಬಹುದು. (ಜೂನ್ ೬, ೨೦೦೮ ವಿಜಯ ಕರ್ನಾಟಕ) 'ಕೆದರ್ತಾರೆ' ಎಂಬ ಪದ ಶೀರ್ಷಿಕೆಯಲ್ಲಿ 'ಸೋತಾಗ ಕೆಲವರು ತಿಪ್ಪೆ ಕೆದರ್ತಾರೆ' ಎಂದು ಪ್ರಯೋಗವಾಗಿದೆ. (ಜೂನ್ ೭, ೨೦೦೮ ವಿಜಯ ಕರ್ನಾಟಕ) 'ಆಕೈತಿ' ಈ ಪ್ರಾದೇಶಿಕ ಪದ ಕನ್ನಡದ ಬರಹ ರೂಪದಲ್ಲಿ 'ಆಗುತ್ತದೆ' ಎಂದಾಗುತ್ತದೆ. ಈ ಪದ 'ಕುರಿ ಬೇಕೆನ್ನೋರು ಇದ್ರ ನೋಡ್ರಿ ಗ್ರ್ಯಾಂಟ್ ವೇಸ್ಟ್ ಆಕೈತಿ' ಎಂದು ಶೀರ್ಷಿಕೆಯಲ್ಲಿ ಪ್ರಯೋಗವಾಗಿವೆ. ಕನ್ನಡ ದಿನಪತ್ರಿಕೆಗಳ ಶೀರ್ಷಿಕೆಯಲ್ಲಿ ಬಳಕೆಯಾಗುವ ಅನ್ಯ ಭಾಷಾ ಪದಗಳು ಕನ್ನಡಕ್ಕೆ ಬರುವಾಗ ಹೆಚ್ಚಾಗಿ ನಾಮಪದಗಳಿಗೆ ಸಂಬಂಧಿಸಿದ ಪದಗಳಿರುತ್ತವೆ. ಅಂದರೆ ಪ್ರತಿಶತ ೯೮ ರಷ್ಟು ನಾಮಪದಗಳಿದ್ದರೆ, ಶೇ. ೨ ರಷ್ಟು ಪದಗಳು ಕ್ರಿಯಾಪದಗಳು ಹಾಗೂ ಗುಣಪದಗಳಾಗಿರುತ್ತವೆ.

ರಾಜ್ಯ ಮಟ್ಟದ ಕನ್ನಡ ದಿನಪತ್ರಿಕೆಗಳಾದ ಕನ್ನಡಪ್ರಭದಲ್ಲಿ ಪ್ರತಿಶತ ೩೫ ರಷ್ಟು ಇಂಗ್ಲೀಷ್ ಪದಗಳು ಶೀರ್ಷಿಕೆಯಲ್ಲಿ ಬಳಕೆಯಾದರೆ, ಪ್ರಜಾವಾಣಿಯಲ್ಲಿ ಶೇ. ೩ ರಷ್ಟು,

ಉದಯವಾಣಿಯಲ್ಲಿ ೫೦%, ಸಂಯುಕ್ತ ಕರ್ನಾಟಕದಲ್ಲಿ ೪೮%, ವಿಜಯ ಕರ್ನಾಟಕದಲ್ಲಿ ೫೫% ರಷ್ಟು ಇಂಗ್ಲೀಷ್ ಪದಗಳು ಬಳಕೆಯಾಗುವುದು ಕಂಡು ಬರುತ್ತದೆ. ಮೇಲಿನ ಎಲ್ಲಾ ಪತ್ರಿಕೆಗಳನ್ನು ಗಮನಿಸಿದಾಗ ಪ್ರಜಾವಾಣಿಯ ಪತ್ರಿಕೆಗಳ ಶೀರ್ಷಿಕೆಗಳಲ್ಲಿ ಇಂಗ್ಲೀಷ್ ಪದಗಳ ಬಳಕೆ ತುಂಬಾ ಕಡಿಮೆ ಎಂದೇ ಹೇಳಬಹುದು.

ದಿನಪತ್ರಿಕೆಗಳ ಶೀರ್ಷಿಕೆಗಳಲ್ಲಿ ಅನ್ಯ ಭಾಷೆಗಳಾದ ಅರೆಬ್ಬಿಕ್, ಪಾರಸಿ, ಮರಾಠಿ, ಹಿಂದಿ, ಇಂಗ್ಲೀಷ್ ಪದಗಳು ಬಳಕೆಯಾಗುತ್ತಿದ್ದು, ಆ ಪದಗಳ ಮೂಲ ಅರ್ಥ ಹಾಗೂ ಪದ ಪ್ರಯೋಗವನ್ನು ಉದಾಹರಣೆಗಳ ಮೂಲಕ ಗಮನಿಸಬಹುದು.

**ಅಡ್ಡಿ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ೧) ಗೌರವ, ದೊಡ್ಡಸ್ತಿಕೆ, ಹಿರಿತನ ೨) ಆಡಂಬರ, ಡೌಲು ಮುಂತಾದ ಅರ್ಥಗಳನ್ನು ಹೊಂದಿದೆ. ಮರಾಠಿಯಲ್ಲಿ ಅಡ್ಡಾ = ದೊಡ್ಡಸ್ತಿಕೆ, ಅಧ್ಯತೆ, ಧಿಮಾಕು ಎಂದು ಬಳಕೆಯಾಗಿದೆ. ಕನ್ನಡದಲ್ಲಿ ದೀರ್ಘ ಸ್ವರವನ್ನು ಕಳೆದುಕೊಂಡು 'ಇ' ಕಾರಂತ್ಯವಾಗಿ ಅಡ್ಡಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಅನಂತ-ಯಡ್ಡಿ, ನನಗೆ ಅಡ್ಡಿ'. ಇಲ್ಲಿ ಅಡ್ಡಿ ಎಂಬ ಪದವು ತಡೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ವಿ.ಕರ್ನಾಟಕ, ಜೂ.೨**)

**ಅಮಲು** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು, ೧.ಮದ್ಯಪಾನದಿಂದ ಉಂಟಾಗುವ ಪಿತ್ತವಿಕಾರ ೨) ಒಂದು ಬಗೆಯ ಮಾದಕ ವಸ್ತು ೩ ಕೆಲಸ, ವ್ಯವಹಾರ ೪ ಆಳ್ವಿಕೆ, ಆಡಳಿತದ ಮೇಲ್ವಿಚಾರಣೆ ೫ ಹುದ್ದೆ, ಪದವಿ, ಅಧಿಕಾರ ೬ ಭೂಕಂದಾಯದ ವಸೂಲಿ ಎಂಬ ಅರ್ಥವನ್ನು ಕೊಡುತ್ತದೆ. ಅರೆಬ್ಬಿಕ್, ಹಿಂದಿ, ಮರಾಠಿ – ಅಮಲ್ ಎಂದು ಬಳಕೆಯಾದರೆ ಕನ್ನಡದಲ್ಲಿ ಅಮಲ್, ಅಮಲು, ಅಮಲೆ, ಅಮಿಲ್, ಅಮೀಲು ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಮುಚ್ಚಿದ ಬಾರ್‌ನಲ್ಲಿ ಮದ್ಯದ ಅಮಲು' ಇಲ್ಲಿ ನಿಶೆ ಬರಿಸುವ ಮಾದಕ ವಸ್ತು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ.

**ಅಮಾನತ್ತು:** (ನಾಮಪದ) ಅರೆಬ್ಬಿ ಮೂಲದಿಂದ ಬಂದದ್ದು. ಜಮಾ-ಖರ್ಚುಗಳಲ್ಲಿ ಲೆಕ್ಕಕ್ಕೆ ಸೇರಿಸದೇ ಹಾಗೆಯೇ ಬಿಟ್ಟ ವಸ್ತು, ಬಳಸದೇ ಭದ್ರವಾಗಿರುವ ವಸ್ತು, ಎಂಬ ಅರ್ಥವನ್ನು ಕೊಡುತ್ತದೆ. ಮರಾಠಿ – ಅನಾಮತ್, ಅರೆಬ್ಬಿಕ್ – ಅಮಾನತ್, ಕನ್ನಡದಲ್ಲಿ ಅಮಾನತ್ತು ಎಂದು ಬಳಕೆಯಾಗಿದೆ.

ಪ್ರಯೋಗ – 'ಬಳ್ಳಾರಿ ಎಸ್ಪಿ ಅಮಾನತ್ತು' ಇಲ್ಲಿ ಕೆಲಸದಿಂದ ಹೊರಗುಳಿಸಿದ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಪ್ರಜಾವಾಣಿ, ಮೇ.೧೬**)

**ಕತಲ್** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು ಕೊಲೆ, ವಧೆ ಎಂಬ ಅರ್ಥವನ್ನು ಕೊಡುತ್ತದೆ. ಅರೆಬ್ಬಿಕ್‌ನಲ್ಲಿ ಕತ್ಲ್, ಮರಾಠಿಯಲ್ಲಿ ಕತಲ್, ಕತ್ತಲ್ ಎಂದು, ಕನ್ನಡದಲ್ಲಿ ಕತಲ್, ಖತಲ್, ಖತಲು ಎಂದು ಬಳಕೆಯಾಗಿದೆ.

ಪ್ರಯೋಗ – 'ಉಗ್ರರ ಪರಮಾಪ್ತ ಪದ ಜಿಹಾದ್ ಅಲ್ಲ ಕತಲ್'. ಇಲ್ಲಿ ಕತಲ್ ಎಂಬ ಪದವು ಕತ್ತರಿಸು, ಕೊಲೆ ಮಾಡು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಉದಯವಾಣಿ, ಜೂ.೪)**

**ಕಬೂಲು** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ಒಪ್ಪಿಗೆ, ಒಪ್ಪಂದ, ಸಮ್ಮತಿ ಮುಂತಾದ ಅರ್ಥಗಳನ್ನು ಹೊಂದಿದೆ. ಅರೆಬ್ಬಿ, ಹಿಂದಿಯಲ್ಲಿ ಕಬೂಲ್ ಎಂದು, ಮರಾಠಿಯಲ್ಲಿ ಕಬೂಲ್, ಕಬೂಲೀ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜ್ಯನ್ಯಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯವಾಗಿ ಕಬೂಲು ಎಂದು ಬಳಕೆಯಾಗಿದೆ.

ಪ್ರಯೋಗ – 'ಸ್ಪೀಕರ್ ಆಗಲು ಶೆಟ್ಟರ್ ಕಬೂಲು'. ಇಲ್ಲಿ ಕಬೂಲು ಎಂಬ ಪದವು ಒಪ್ಪಿಗೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೪.)**

**ಕಸರತ್ತು** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು, ೧) ವ್ಯಾಯಾಮ, ತಾಲೀಮು ೨) ಅಭ್ಯಾಸ, ತರಬೇತಿ, ಕವಾಯತು ೩) ಶಕ್ತಿಯ ಹಾಗೂ ಚಮತ್ಕಾರದ ಪ್ರದರ್ಶನ ಎಂಬ ಅರ್ಥಗಳನ್ನು ಕೊಡುತ್ತದೆ. ಹಿಂದಿ, ಮರಾಠಿಯಲ್ಲಿ ಕಸರತ್, ಅರಬ್ಬಿಕ್‌ನಲ್ಲಿ ಕಸ್ರತ್ ಎಂದು, ಕನ್ನಡದಲ್ಲಿ ಕಸರತ್, ಕಸರತ್ತು ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಕಾಂಗ್ರೆಸ್‌ನಿಂದ ತೆರೆಮರೆಗೆ ಕಸರತ್ತು'. ಇಲ್ಲಿ ಕಸರತ್ತು ಎಂಬುದು ಚಮತ್ಕಾರ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ.

**ಕಾನೂನು** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು, ಕಟ್ಟಳೆ, ನಿಯಮ, ಕಾಯಿದೆ ಎಂಬ ಅರ್ಥವನ್ನು ಕೊಡುತ್ತದೆ. ಅರೆಬ್ಬಿಕ್, ಹಿಂದಿ, ಮರಾಠಿಯಲ್ಲಿ ಕಾನೂನ್ ಎಂದು ಬಳಕೆಯಾದರೆ, ಕನ್ನಡದಲ್ಲಿ ಕಾನೂನು ಎಂದು ಬಳಕೆಯಾಗಿದೆ.

ಪ್ರಯೋಗ – 'ಕಾನೂನು ತಜ್ಞರ ಜೊತೆಗೆ ಠಾಕೂರ್ ಸಮಾಲೋಚನೆ' ಇಲ್ಲಿ ಕಾಯಿದೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಉದಯವಾಣಿ, ಜೂ.೧)**

**ಕಾರ್ಖಾನೆ :** (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ಯಂತ್ರಗಳ ಸಹಾಯದಿಂದ ದೊಡ್ಡ ಪ್ರಮಾಣದಲ್ಲಿ ವಸ್ತುಗಳನ್ನು ತಯಾರಿಸುವ ಸ್ಥಳ-ಸಂಸ್ಥೆ ಎಂಬ ಅರ್ಥವನ್ನು ಹೊಂದಿದೆ. ಪಾರಸಿಯಲ್ಲಿ ಕಾರ್‌ಖಾನಾ, ಮರಾಠಿಯಲ್ಲಿ ಕಾರ್‌ಖಾನಾ ಎಂದು ಬಳಕೆಯಾದರೆ, ಕನ್ನಡದಲ್ಲಿ ಕಾರ್ಖಾನೆ, ಕಾರಖಾನೆ ಎಂದು ದೀರ್ಘಾಂತ್ಯವನ್ನು ಕಳೆದುಕೊಂಡು 'ಎ' ಕಾರಂತ್ಯವಾಗಿ ಬಳಕೆಯಾಗಿದೆ.

ಪ್ರಯೋಗ – 'ಕೇಂದ್ರ ರಸಗೊಬ್ಬರ ಕಾರ್ಖಾನೆ ತಿಕ್ಕಾಟ: ರೈತರ ಪರದಾಟ'. ಇಲ್ಲಿ ವಸ್ತುಗಳನ್ನು ತಯಾರಿಸುವ ಸ್ಥಳ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂ.ಕರ್ನಾಟಕ, ಜೂ.೪)**

**ಕುಸ್ತಿ :** (ನಾಮಪದ) ಈ ಪದವು ಪಾರಸಿ ಮೂಲದಿಂದ ಬಂದಿದ್ದು ಜಟ್ಟಿ, ಕಾಳಗ, ಮಲ್ಲಯುದ್ಧ ಎಂಬ ಅರ್ಥಗಳನ್ನು ಕೊಡುತ್ತದೆ.

ಪ್ರಯೋಗ – 'ಚುನಾವಣೆಯ ಜಂಗಿ ಕುಸ್ತಿಯಲ್ಲಿ ಖಡ್ಯಾದ ಕುಸ್ತಿಪಟು' **(ಮೇ. ೧೯, ಕನ್ನಡಪ್ರಭ)**

**ಕೂಲಿಂಗ್ ಗ್ಲಾಸ್ :** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದೆ. ತಂಪಾದ, ತಣ್ಣಗಿನ ಕನ್ನಡಕ ಎಂಬ ಅರ್ಥವನ್ನು ಕೊಡುತ್ತದೆ.

ಪ್ರಯೋಗ – 'ಐಶ್ವರ್ಯ ರೈ ಕೂಲಿಂಗ್‌ಗ್ಲಾಸ್‌ಗೆ ೧೦ ಲಕ್ಷ ರೂ'. ಇಲ್ಲಿ ತಂಪಾದ ಕನ್ನಡಕ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಕ.ಪ್ರಭ, ಮೇ.೨೭)**

**ಖರೀದಿ :** (ನಾಮಪದ) ಮರಾಠಿ ಮೂಲದಿಂದ ಬಂದಿದೆ.

ಅರ್ಥ – ಬೆಲೆಕೊಟ್ಟು ಕೊಂಡುಕೊಳ್ಳುವಿಕೆ, ಬೆಲೆ, ಕ್ರಯ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಮರಾಠಿಯಲ್ಲಿ ಖರೀದಿ ಎಂದು, ಹಿಂದಿ, ಪಾರಸಿಯಲ್ಲಿ ಖರೀದ್ ಎಂದು ಬಳಕೆಯಾಗಿದೆ.

ಪ್ರಯೋಗ – 'ಚುನಾವಣೆಯಲ್ಲಿ ಹರಿದ ಹಣದ ಹೊಳೆ ಖರೀದಿ ಭರಾಟೆ' ಇಲ್ಲಿ ಖರೀದಿ ಎಂಬ ಪದವು ಕೊಂಡುಕೊಳ್ಳು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಕ.ಪ್ರಭ, ಮೇ. ೨೩)**

**ಖರ್ಚು :** (ನಾಮಪದ) ಮರಾಠಿ ಮೂಲದಿಂದ ಬಂದಿದೆ.

ಅರ್ಥ – ವೆಚ್ಚಮಾಡು, ಬಳಸು.

ಮರಾಠಿ – ಖರ್ಚೀ ಎಂದು ಬಳಕೆಯಾಗುತ್ತದೆ.

ಪ್ರಯೋಗ – 'ಚುನಾವಣೆಗೆ ಎಲ್ಲರೂ ಖರ್ಚು ಮಾಡಿದರೆ ಇವರು ಉಳಿಸಿದರು' ಇಲ್ಲಿ ಖರ್ಚು ಎಂಬ ಪದವು ಬಳಸು ಎಂಬ ಅರ್ಥದಲ್ಲಿ ಬಳಕೆಯಾಗಿದೆ. **(ಕನ್ನಡಪ್ರಭ, ಮೇ. ೨೦)**

**ಖಾತರಿ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ೧) ವಿಚಾರ, ಚರ್ಚೆ, ಪರ್ಯಾಯಲೋಚನೆ ೨) ನಂಬಿಗೆ, ವಿಶ್ವಾಸ ೩) ವಿಷಯ, ನಿರ್ಧಾರ ೪) ಹೊಣೆ, ಜವಾಬ್ದಾರಿ ಎಂಬ ಅರ್ಥಗಳನ್ನು ಹೊಂದಿದೆ. ಹಿಂದಿ, ಮರಾಠಿಯಲ್ಲಿ ಖಾತರ್ ಎಂದು, ಅರೆಬ್ಬಿಕ್, ಪಾರಸಿಯಲ್ಲಿ ಖಾತಿರ್, ಖಾತರೀ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಇ' ಕಾರಂತ್ಯವಾಗಿ ಖಾತರಿ, ಖಾತ್ರಿ ಎಂದು ಬಳಕೆಯಾಗಿದೆ. ಪ್ರಯೋಗ – 'ಉದ್ಯೋಗ ಖಾತರಿ ಯೋಜನೆ ಜಾರಿ ನಿಗಾಕ್ಕೆ ಅಂತರ್ಜಾಲ'. ಇಲ್ಲಿ ಖಾತರಿ ಎಂಬ ಪದವು ವಿಚಾರ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂ.ಕರ್ನಾಟಕ, ಜೂ.೨)**

**ಖಾದಿ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ಕೈನೂಲಿನಿಂದ ಕೈಮಗ್ಗದಲ್ಲಿ ತಯಾರಿಸಿದ ಬಟ್ಟೆ, ಖದ್ದರ್ ಎಂಬ ಅರ್ಥಗಳನ್ನು ಹೊಂದಿದೆ. ಹಿಂದಿ, ಮರಾಠಿಯಲ್ಲಿ ಖಾದೀ ಎಂದು ಬಳಕೆಯಾದರೆ, ಕನ್ನಡದಲ್ಲಿ ದೀರ್ಘಾಂತ್ಯವನ್ನು ಕಳೆದುಕೊಂಡು ಖಾದಿ ಎಂದು ಬಳಕೆಯಾಗುತ್ತದೆ. ಪ್ರಯೋಗ – 'ಹಾರ ತುರಾಯಿ ಬದಲು ಖಾದಿ ಬಟ್ಟೆ'. **(ಸಂ.ಕರ್ನಾಟಕ. ಜೂ.೪)**

**ಖಾಯಂ** : (ಗುಣಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು, ಸ್ಥಿರವಾದ, ಖಚಿತವಾದ, ಶಾಶ್ವತವಾದ ಎಂಬ ಅರ್ಥಗಳನ್ನು ಕೊಡುತ್ತದೆ. ಅರೆಬ್ಬಿಕ್ – ಖಾಯಮ್, ಹಿಂದಿ, ಮರಾಠಿಯಲ್ಲಿ ಖಾಯಮ್ ಎಂದು, ಕನ್ನಡದಲ್ಲಿ ಕಾಯಂ, ಖಾಯಂ ಎಂದು ಬಳಕೆಯಾಗುತ್ತದೆ.

ಪ್ರಯೋಗ – 'ಹಂಗಾಮಿ ಅಂಚೆ ನೌಕರರ ಖಾಯಂಗೆ ಆಗ್ರಹ'. ಇಲ್ಲಿ ಖಾಯಂ ಎಂಬ ಪದವು ಖಚಿತವಾದ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಉದಯವಾಣಿ, ಜೂ.೩)**

**ಖಾಸಗಿ** : (ಗುಣಪದ) ಅರೆಬ್ಬಿ ಮೂಲದಿಂದ ಬಂದಿದ್ದು. ಸ್ವಂತದ, ಸರ್ಕಾರದ ಅಧಿಕಾರಕ್ಕೆ ಸೇರದ, ವೈಯಕ್ತಿಕವಾದ ಒಡೆತನವುಳ್ಳ ಎಂಬ ಅರ್ಥವನ್ನು ಹೊಂದಿದೆ. ಅರೆಬ್ಬಿ, ಹಿಂದಿ, ಮರಾಠಿಯಲ್ಲಿ ಖಾಸಗೀ ಎಂದು ಬಳಕೆಯಾದರೆ, ಕನ್ನಡದಲ್ಲಿ ದೀರ್ಘಾಕ್ಷರವನ್ನು ಕಳೆದುಕೊಂಡು ಹೃಸ್ವಸ್ವರವಾಗಿ ಖಾಸಗಿ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ತುಂಗಭದ್ರಾ ನೀರು ಬಳಸಲು ಹಗ್ಗ ಜಗ್ಗಾಟ: ಖಾಸಗಿ ಕಂಪನಿಗಳು ರೈತರ ತಂತ್ರ ಪ್ರತಿತಂತ್ರದಾಟ'. ಇಲ್ಲಿ ವೈಯಕ್ತಿಕ ಒಡೆತನ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೪)**

**ಖುಲಾಸೆ :** (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದೆ. ೧) ಬಿಡುಗಡೆ, ಮುಕ್ತಿ ೨) ತೆರವಾಗುವಿಕೆ, ಖಾಲಿಯಾಗುವಿಕೆ ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿಕ್, ಹಿಂದಿ, ಮರಾಠಿಯಲ್ಲಿ ಖುಲಾಸಾ ಎಂದು ಬಳಕೆಯಾದರೆ, ಕನ್ನಡದಲ್ಲಿ ದೀರ್ಘಾಕ್ಷರಗಳನ್ನು ಕಳೆದುಕೊಂಡು 'ಎ' ಕಾರಂತ್ಯವಾಗಿ ಬಳಕೆಯಾಗುತ್ತದೆ. (ಖುಲಾಸೆ)

ಪ್ರಯೋಗ – 'ಕೊಲೆ ಪ್ರಕರಣ: ಖುಲಾಸೆಗೆ ಲಂಚ, ಆಸ್ಸಾಂ ಶಿಕ್ಷಣ ಮಂತ್ರಿ ಬಂಧನ'. ಇಲ್ಲಿ ಬಿಡುಗಡೆ ಎಂಬ ಅರ್ಥದಲ್ಲಿ ಪದ ಪ್ರಯೋಗವಾಗಿದೆ. **(ಸಂ.ಕರ್ನಾಟಕ, ಜೂ.೫)**

**ಖುಲಾಸೆ :** (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದೆ. ೧) ಬಿಡುಗಡೆ, ಮುಕ್ತಿ ೨) ತೆರವಾಗುವಿಕೆ, ಖಾಲಿಯಾಗುವಿಕೆ ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿಕ್, ಹಿಂದಿ, ಮರಾಠಿಯಲ್ಲಿ ಖುಲಾಸಾ ಎಂದು ಬಳಕೆಯಾದರೆ, ಕನ್ನಡದಲ್ಲಿ ದೀರ್ಘಾಕ್ಷರಗಳನ್ನು ಕಳೆದುಕೊಂಡು 'ಎ' ಕಾರಂತ್ಯವಾಗಿ ಬಳಕೆಯಾಗುತ್ತದೆ. (ಖುಲಾಸೆ)

ಪ್ರಯೋಗ – 'ಕೊಲೆ ಪ್ರಕರಣ: ಖುಲಾಸೆಗೆ ಲಂಚ, ಆಸ್ಸಾಂ ಶಿಕ್ಷಣ ಮಂತ್ರಿ ಬಂಧನ'. ಇಲ್ಲಿ ಬಿಡುಗಡೆ ಎಂಬ ಅರ್ಥದಲ್ಲಿ ಪದ ಪ್ರಯೋಗವಾಗಿದೆ. **(ಸಂ.ಕರ್ನಾಟಕ, ಜೂ.೫)**

**ಖೋಟಾ :** (ಗುಣಪದ) ಹಿಂದಿ ಮೂಲದಿಂದ ಬಂದಿದ್ದು. ೧) ಕೆಟ್ಟ, ಕ್ರೂರವಾದ ೨) ನಿಜವಲ್ಲದ, ಕೃತ್ರಿಮವಾದ, ನಕಲಿ ಮುಂತಾದ ಅರ್ಥಗಳನ್ನು ಹೊಂದಿದೆ. ಹಿಂದಿ ಹಾಗೂ ಮರಾಠಿಯಲ್ಲಿ ಖೋಟಾ ಎಂದು ಬಳಕೆಯಾದರೆ ಕನ್ನಡದಲ್ಲಿ ಯಥಾವತ್ತಾಗಿ ಬಳಕೆಯಾಗಿದೆ.

ಪ್ರಯೋಗ – 'ಖೋಟಾನೋಟು ಪತ್ತೆ'. ಇಲ್ಲಿ ಎಂಬ ಪದವು ನಕಲು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೧)**

**ಗೋದಾಮು:** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ದಾಸ್ತಾನು, ಮಳಿಗೆ, ಸಂಗ್ರಹ ಕೋಣೆ ಎಂಬ ಅರ್ಥಗಳನ್ನು ಹೊಂದಿದೆ. ಇಂಗ್ಲೀಷ್‌ನಲ್ಲಿ 'Godown' ಎಂದು ಬಳಕೆಯಲ್ಲಿದೆ. ಕನ್ನಡದಲ್ಲಿ 'ನ' ಕಾರಕ್ಕೆ ಬದಲಾಗಿ 'ಮ' ಕಾರದೊಂದಿಗೆ ಗೋದಾಮು ಎಂದು ಬಳಕೆಯಾಗಿದೆ.

ಪ್ರಯೋಗ – 'ಗೋದಾಮುಗಳಿಗೆ ದಾಳಿ: ಅಧಿಕಾರಿಗಳಿಂದಲೇ ಗೊಬ್ಬರ

**ಗೋಲ್ ಮಾಲ್ :** (ಕ್ರಿಯಾಪದ) ಇಂಗ್ಲೀಷ್ ಮೂಲದಿಂದೆ ಬಂದಿದ್ದು. ಮೋಸ, ವಂಚನೆ ಮುಂತಾದ ಅರ್ಥಗಳನ್ನು ಕೊಡುತ್ತದೆ. ಇಂಗ್ಲೀಷಿನಲ್ಲಿ 'Goalmaal' ಎಂದು ಬಳಕೆಯಾಗಿದೆ.

ಪ್ರಯೋಗ – 'ಕುಮುಟಾ: ಫಲಿತಾಂಶದಲ್ಲಿ ಗೋಲ್‌ಮಾಲ್ ಶಂಕೆ'. ಇಲ್ಲಿ ಮೋಸ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಉದಯವಾಣಿ, ಜೂ.೧**)

**ಚಹರೆ** : (ನಾಮಪದ) ಪಾರಸಿ ಮೂಲದಿಂದ ಬಂದಿರುವ ಈ ಪದ ಆಕೃತಿ, ಮುದ್ರೆ, ಲಕ್ಷಣ ಎಂಬ ಅರ್ಥಗಳನ್ನು ಕೊಡುತ್ತದೆ. ಪಾರಸಿಯಲ್ಲಿ ಚೆಹ್ರಾ, ಹಿಂದಿಯಲ್ಲಿ ಚೆಹರಾ, ಮರಾಠಿಯಲ್ಲಿ ಚಹರಾ, ಚೇಹರಾ, ಚೇಹೆರಾ ಎಂದು ಬಳಕೆಯಾಗಿದೆ.

ಪ್ರಯೋಗ – 'ಎಲ್ಲರೂ ಪೊಲೀಸ್ ಪಹರೆ ಅಧಿಕಾರಿಗಳ ಮಂದಹಾಸದ ಚಹರೆ' ಇಲ್ಲಿ ಚಹರೆ ಎನ್ನುವ ಪದವು ಲಕ್ಷಣ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಮೇ. ೧೭, ಕನ್ನಡಪ್ರಭ**)

**ಚಾಕು** : (ನಾಮಪದ) ಪಾರಸಿ ಮೂಲದಿಂದ ಬಂದಿದ್ದು, ಕೊಯ್ಯುವ ಸಾಧನ, ಚಿಕ್ಕ ಚೂರಿ ಎಂಬ ಅರ್ಥವನ್ನು ಕೊಡುತ್ತದೆ. ಪಾರಸಿ, ಹಿಂದಿ, ಮರಾಠಿಯಲ್ಲಿ ಚಾಕೂ ಎಂದು ಬಳಕೆಯಾಗುತ್ತದೆ.

ಪ್ರಯೋಗ – 'ನೀರಜ್ ಕೊಲೆ ಚಾಕು ಪತ್ತೆ'. ಇಲ್ಲಿ ಚಾಕು ಎಂಬುದು ಕೊಯ್ಯುವ ಸಾಧನ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಉದಯವಾಣಿ, ಜೂ.೩**)

**ಜಂಗಿ** : (ಗುಣಪದ) ಅರೆಬ್ಬಿಕ್ ಮೂಲದಿಂದ ಬಂದಿದೆ.

ಅರ್ಥ – ೧) ಯುದ್ಧಕ್ಕೆ ಸಂಬಂಧಿಸಿದ ೨) ಹೇರಳವಾದ, ಅತೀಶಯವಾದ, ಹೆಚ್ಚಿನ, ವಿಶೇಷವಾದ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ.

ಅರೆಬ್ಬಿಕ್, ಹಿಂದಿ, ಮರಾಠಿ ಭಾಷೆಯಲ್ಲಿ 'ಜಂಗೀ' ಎಂದು ಬಳಕೆಯಲ್ಲಿದ್ದರೆ ಕನ್ನಡದಲ್ಲಿ ಜಂಗಿ ಎಂದು ಬಳಕೆಯಾಗುತ್ತದೆ.

ಪ್ರಯೋಗ – 'ಚುನಾವಣೆ ಜಂಗಿ ಕುಸ್ತಿಯಲ್ಲಿ ಖಡ್ಯಾದ ಕುಸ್ತಿಪಟು' ಇಲ್ಲಿ ಯುದ್ಧ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಕನ್ನಡಪ್ರಭ, ಮೇ. ೨೩**)

**ಜಖಂ** : (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ೧) ಗಾಯ, ಪೆಟ್ಟು ೨) ನಷ್ಟ, ಕೇಡು ಎಂಬ ಅರ್ಥಗಳನ್ನು ಹೊಂದಿದೆ. ಪಾರಸಿ, ಹಿಂದಿ, ಮರಾಠಿಯಲ್ಲಿ ಜಖಮ್ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜನಾಂತ್ಯವನ್ನು ಕಳೆದುಕೊಂಡು ಜಖಂ ಎಂದು ಬಳಕೆಯಾಗಿದೆ.

ಪ್ರಯೋಗ – 'ರಸಗೊಬ್ಬರ ಪ್ರತಿಭಟನೆ: ಬಸ್ ಜಖಂ'. ಇಲ್ಲಿ ನಷ್ಟ ಎಂಬ ಅರ್ಥದಲ್ಲಿ ಈ ಪದ ಪ್ರಯೋಗವಾಗಿದೆ. (**ವಿ.ಕರ್ನಾಟಕ, ಜೂ.೩**)

**ಜಪ್ತಿ** : (ನಾಮಪದ) ಮರಾಠಿ ಮೂಲದಿಂದ ಬಂದಿದೆ. (ಸಾಲಗಾರ ಅಥವಾ

ತಪ್ಪಿತಸ್ಥನ ಆಸ್ತಿ ಮೊದಲಾದವನ್ನು ಬಲಾತ್ಕಾರವಾಗಿ) ವಶಪಡಿಸಿಕೊಳ್ಳುವುದು, ಮುಟ್ಟುಗೋಲು ಹಾಕುವುದು ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ.
ಮರಾಠಿ – ಜಪ್ತೀ, ಜಪ್ತ್ ಎಂದು.
ಅರೆಬ್ಬಿಕ್ – ಜಬ್ತ್ ಎಂದು, ಹಿಂದಿಯಲ್ಲಿ ಜಬ್ತಿ, ಜಪ್ತ್, ಜಬ್ ಎಂದು ಬಳಕೆಯಾಗುತ್ತದೆ.
ಪ್ರಯೋಗ – 'ಬಳ್ಳಾರಿ ಎಸಿ ಕಛೇರಿ ಪೀಠೋಪಕರಣ ಜಪ್ತಿ' ಇಲ್ಲಿ ಜಪ್ತಿ ಎಂಬ ಪದವು 'ವಶಪಡಿಸು' ಎಂಬ ಅರ್ಥದಲ್ಲಿ ಬಳಕೆಯಾಗಿದೆ.

**ಜಾಮೀನು** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ೧) ಈಡು, ಹೊಣೆ ೨) ಹೊಣೆಗಾರ, ಜವಾಬ್ದಾರಿ ಹೊತ್ತವನು ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿಕ್, ಮರಾಠಿಯಲ್ಲಿ 'ಜಾಮೀನ್' ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯವಾಗಿ ಬಳಕೆಯಾಗಿದೆ.
ಪ್ರಯೋಗ – 'ಜಾಮೀನು ರಹಿತ ವಾರೆಂಟ್: ಮುಂದಿನ ಕ್ರಮಕ್ಕೆ ತಡೆ'. ಇಲ್ಲಿ ಹೊಣೆ ಎಂಬ ಅರ್ಥದಲ್ಲಿ ಈ ಪದ ಪ್ರಯೋಗವಾಗಿದೆ.
**(ಸಂ.ಕರ್ನಾಟಕ, ಜೂ.೩)**

**ಜಿಲ್ಲೆ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ಹಲವು ತಾಲ್ಲೂಕುಗಳಲ್ಲಿ ಒಳಗೊಂಡ ದೇಶದ ಒಂದು ಭಾಗ. ಡಿಸ್ಟ್ರಿಕ್ಟ್ ಎಂಬ ಅರ್ಥವನ್ನು ಎಂಬ ಅರ್ಥವನ್ನು ಹೊಂದಿದೆ. ಅರೆಬ್ಬಿಯಲ್ಲಿ ಜಿಲಆ, ಹಿಂದಿಯಲ್ಲಿ ಜಿಲ್ಲಾ, ಮರಾಠಿಯಲ್ಲಿ ಜಿಲ್ಲಾ ಎಂದು ಬಳಕೆಯಾದರೆ, ಕನ್ನಡದಲ್ಲಿ ಯಥಾವತ್ತಾಗಿ ಜಿಲ್ಲಾ ಇಲ್ಲವೇ 'ಎ' ಕಾರಂತ್ಯದೊಂದಿಗೆ 'ಜಿಲ್ಲೆ' ಎಂದು ಬಳಕೆಯಾಗುತ್ತದೆ.
ಪ್ರಯೋಗ – 'ಮುಖ್ಯಮಂತ್ರಿ ಜಿಲ್ಲೆ: ಅಭಿವೃದ್ಧಿಯ ನಿರೀಕ್ಷೆ'. **(ಸಂ.ಕರ್ನಾಟಕ, ಜೂ.೧)**

**ಠಿಕಾಣಿ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ಸ್ಥಳ, ಜಾಗ, ತಂಗುವ ಸ್ಥಳ ಎಂಬ ಅರ್ಥಗಳನ್ನು ಕೊಡುತ್ತದೆ. ಮರಾಠಿಯಲ್ಲಿ ಠಿಕಾಣ, ಠಿಕಾಣಾ ಎಂದು, ಹಿಂದಿಯಲ್ಲಿ ಠಿಕನಾ ಎಂದು ಬಳಕೆಯಾದರೆ, ಕನ್ನಡದಲ್ಲಿ ಟಿಕಾಣಿ, ಠಿಕಾಣಿ ಎಂದು ಬಳಕೆಯಾಗುತ್ತದೆ.
ಪ್ರಯೋಗ – 'ಶುಕ್ರವಾರದಿಂದ ೨ ದಿನ ರಾಜ್ಯದಲ್ಲಿ ಅಡ್ವಾಣಿ ಠಿಕಾಣಿ' ಇಲ್ಲಿ ಠಿಕಾಣಿ ಎಂಬ ಪದವು ತಳವೂರು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಮೇ.೧)**

**ತಕರಾರು** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ೧) ವಿವಾದ, ದೂರು ೨) ಅಡ್ಡಿ, ಆಕ್ಷೇಪಣೆ ಮುಂತಾದ ಅರ್ಥಗಳನ್ನು ಹೊಂದಿದೆ. ಅರೆಬ್ಬಿ,

ಹಿಂದಿ, ಮರಾಠಿಯಲ್ಲಿ ತಕರಾರ್, ತಕ್ರಾರ್ ಎಂದು ಬಳಕೆಯಲ್ಲಿದೆ. ಕನ್ನಡದಲ್ಲಿ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಉ'ಕಾರಂತ್ಯದೊಂದಿಗೆ ತಕರಾರು ಎಂದು ಬಳಕೆಯಾಗಿದೆ.

ಪ್ರಯೊಗ – 'ಹಿಂದೂಗಳ ತಕರಾರು ಬಂದರೆ ಸೇತುರಾಂ ಹೆಸರಿಡಿ'. ಇಲ್ಲಿ ತಕರಾರು ಎಂಬ ಪದವು ಆಕ್ಷೇಪಣೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಸಂಯುಕ್ತ ಕರ್ನಾಟಕ, ಜೂ.೪**)

**ತನಿಖೆ** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ಪರೀಕ್ಷಿಸುವುದು, ವಿಚಾರಣೆ, ಶೋಧನೆ ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿಕ್, ಹಿಂದಿಯಲ್ಲಿ ತನಕೀಹ್ ಎಂದು ಬಳಕೆಯಾದರೆ ಕನ್ನಡದಲ್ಲಿ ತನಿಖೆ ಎಂದು ಬಳಕೆಯಾಗಿದೆ.

ಪ್ರಯೋಗ – 'ಕಾರ್ಗಿಲ್: ತನಿಖೆಗೆ ಸಮಿತಿ ರಚಿಸಲು ಷರೀಫ್ ಆಗ್ರಹ'. ಇಲ್ಲಿ ವಿಚಾರಣೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಸಂ.ಕರ್ನಾಟಕ, ಜೂ.೪**)

**ತಪಾಸಣೆ** : (ನಾಮಪದ) ಮರಾಠಿ ಮೂಲದಿಂದ ಬಂದಿದೆ. ಕೂಲಂಕುಷವಾದ, ವಿಚಾರಣೆ, ಪರೀಕ್ಷೆ ಎಂಬ ಅರ್ಥಗಳನ್ನು ಕೊಡುತ್ತದೆ. ಮರಾಠಿಯಲ್ಲಿ ತಪಾಸಣಾ, ತಪಾಶಣೆ ಎಂದು ಬಳಕೆಯಲ್ಲಿದ್ದರೆ, ಕನ್ನಡದಲ್ಲಿ ತಪಾಸಣೆ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ರೈತರ ಪ್ರತಿಭಟನೆ ಗೊಬ್ಬರದಂಗಡಿ ತಪಾಸಣೆ'. ಇಲ್ಲಿ ಪರೀಕ್ಷೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಉದಯವಾಣಿ, ಜೂನ್.೧**)

**ತರಹೇವಾರಿ**: (ಗುಣಪದ) ಮರಾಠಿ ಮೂಲದಿಂದ ಬಂದಿದ್ದು. ವಿಧವಿಧವಾದ, ಬಗೆಬಗೆಯಾದ, ವಿವಿಧ ರೀತಿಯ ಎಂಬ ಅರ್ಥಗಳನ್ನು ಹೊಂದಿದೆ. ಮರಾಠಿಯಲ್ಲಿ ತರ್ಹೆವಾರ ಎಂದು ಬಳಕೆಯಲ್ಲಿದ್ದರೆ, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಇ' ಕಾರಂತ್ಯದೊಂದಿಗೆ ತರಹೇವಾರಿ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ತೈಲ ದುಬಾರಿ: ಪರಿಣಾಮ ತರಹೇವಾರಿ'. ಇಲ್ಲಿ ಈ ಪದವು ಹಲವು ಬಗೆ ಅರ್ಥದಲ್ಲಿ ಪ್ರಯೋಗವಾಗಿದೆ. (**ವಿ.ಕರ್ನಾಟಕ, ಜೂ.೩**)

**ತರಾಟೆ** : (ನಾಮಪದ) ಮರಾಠಿ ಮೂಲದಿಂದ ಬಂದಿದೆ.
ಅರ್ಥ – ಆಕ್ಷೇಪಣೆ, ತಕರಾರು.
ಮರಾಠಿ – ತರಾಠಾ = ಜಂಬ, ಬಡಾಯಿ.

ಪ್ರಯೋಗ – 'ಹೈಕೋರ್ಟ್ ಹೈವೆ ಕಾಮಗಾರಿ ವಿಳಂಬ ಸರ್ಕಾರಕ್ಕೆ ಹೈಕೋರ್ಟ್ ತರಾಟೆ' ಇಲ್ಲಿ ತರಾಟೆ ಎಂಬ ಪದವು ಆಕ್ಷೇಪಣೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ.

**ತಲಾಶ್** : (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ಹುಡುಕುವಿಕೆ, ಶೋಧ ಎಂಬ ಅರ್ಥಗಳನ್ನು ಹೊಂದಿದೆ. ಪಾರಸಿಯಲ್ಲಿ ತಲಾಶ್, ಹಿಂದಿ, ಮರಾಠಿಯಲ್ಲಿ ತಲಾಶ್, ತಲಾಸ್ ಎಂದು ಬಳಕೆಯಲ್ಲಿದೆ. ಕನ್ನಡದಲ್ಲಿ ತಲಾಶ್, ತಲಾಸು ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಸ್ಥಳ ತಲಾಶ್‌ನಲ್ಲಿ ಅಧಿಕಾರಿಗಳು'. ಇಲ್ಲಿ ಹುಡುಕಾಟ ಎಂಬ ಅರ್ಥದಲ್ಲಿ ಈ ಪದ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೧)**

**ತಾಂಡಾ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ೧) ಹಟ್ಟಿ, ಸಣ್ಣಹಳ್ಳಿ ೨) ಲಂಬಾಣಿಗಳ ವಾಸಸ್ಥಾನ ಮುಂತಾದ ಅರ್ಥಗಳನ್ನು ಹೊಂದಿದೆ. ಮರಾಠಿಯಲ್ಲಿ ತಾಂಡಾ ಎಂದು ಬಳಕೆಯಾದರೆ ಕನ್ನಡದಲ್ಲಿ ಯಥಾವತ್ತಾಗಿ ಬಳಕೆಯಾಗಿದೆ.

ಪ್ರಯೋಗ – 'ತಾಂಡಾ ಹೈದಾ ವಿಧಾನಸಭೆಯಲ್ಲಿ ಮಾತಾಡ್ತಾನೆ ಎಂಬುದೇ ಹೆಮ್ಮೆ' ಇಲ್ಲಿ ತಾಂಡಾ ಎಂಬ ಪದವು ಲಂಬಾಣಿಗಳ ವಾಸಸ್ಥಾನ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೨)**

**ತಾಕೀತು** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು, ಎಚ್ಚರಿಕೆ, ಕಟ್ಟಪ್ಪಣೆಯ ಸೂಚನೆ ಎಂಬ ಅರ್ಥಗಳನ್ನು ಕೊಡುತ್ತದೆ. ಮರಾಠಿಯಲ್ಲಿ – ತಾಕೀತ್, ತಾಕೀದ್ ಎಂದು, ಅರಬ್ಬಿ, ಹಿಂದಿಯಲ್ಲಿ ತಾಕೀದ್, ಕನ್ನಡದಲ್ಲಿ ತಾಕೀತು ಎಂದು ಬಳಕೆಯಾಗುತ್ತದೆ.

ಪ್ರಯೋಗ – 'ಹಾಸನ್ ಕ್ಷೇತ್ರ ಬಿಡಲು ದೇವೆಗೌಡರಿಗೆ ತಾಕೀತು' ಇಲ್ಲಿ ತಾಕೀತು ಎಂಬ ಪದವು ಸೂಚನೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ.

**ದಾಸ್ತಾನು** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ಶೇಖರಣೆ, ಶೇಖರಿಸಿಟ್ಟ ಸಾಮಾನು, ಸರಕು ಎಂಬ ಅರ್ಥಗಳನ್ನು ಹೊಂದಿದೆ. ಮರಾಠಿಯಲ್ಲಿ ದಾಸ್ತಾನ್, ಪಾರಸಿಯಲ್ಲಿ ದಾಶ್ತಾನ್ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯವಾಗಿ 'ದಾಸ್ತಾನು' ಎಂದು ಬಳಕೆಯಾಗಿದೆ.

ಪ್ರಯೋಗ – 'ರಸಗೊಬ್ಬರ ಅನಗತ್ಯ ದಾಸ್ತಾನು ಬೇಡ: ರೈತರಿಗೆ ಕಿವಿಮಾತು'. ಇಲ್ಲಿ ಶೇಖರಣೆ ಎಂಬ ಅರ್ಥದಲ್ಲಿ ಬಳಕೆಯಾಗಿದೆ. **(ಸಂ.ಕರ್ನಾಟಕ, ಜೂ.೫)**

**ದುರಸ್ತಿ** : (ಗುಣಪದ) ಪಾರಸಿ ಮೂಲದಿಂದ ಬಂದಿದ್ದು. ೧) ಸರಿಯಾಗಿರುವ, ಒಳ್ಳೆಯ ಸ್ಥಿತಿಯಲ್ಲಿರುವ ೨) ಸರಿಪಡಿಸುವಿಕೆ, ರಿಪೇರಿ, ಜೀರ್ಣೋದ್ಧಾರ ಎಂಬ ಅರ್ಥಗಳನ್ನು ಹೊಂದಿದೆ. ಪಾರಸಿ, ಹಿಂದಿ ಮರಾಠಿಯಲ್ಲಿ ದುರಸ್ತ್, ದುರಸ್ತಿ ಎಂದು ಬಳಕೆಯಾದರೆ, ಕನ್ನಡದಲ್ಲಿ ಯಥಾವತ್ತಾಗಿ ಬಳಕೆಯಾಗಿದೆ.
ಪ್ರಯೋಗ – 'ಎನ್.ಎಚ್.೬೩ ದುರಸ್ತಿಗೆ ಮನವಿ'. ಇಲ್ಲಿ ರಿಪೇರಿ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೪)**

**ಧಾಂದಲೆ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು, ಗದ್ದಲ, ಗಲಾಟೆ, ಹಾವಳಿ, ಕೋಲಾಹಲ ಎಂಬ ಅರ್ಥಗಳನ್ನು ಕೊಡುತ್ತಿದ್ದು, ಹಿಂದಿಯಲ್ಲಿ ಧಾಂಧಲ್ ಎಂದು, ಮರಾಠಿಯಲ್ಲಿ ಧಾಂದಲ್ ಎಂದು ಬಳಕೆಯಲ್ಲಿದೆ.
ಪ್ರಯೋಗ – 'ವಿಜಯ ಮೋರೆಗೆ ಟಿಕೆಟ್ ವಿರೋಧಿಸಿ ಧಾಂದಲೆ'. ಇಲ್ಲಿ ಧಾಂದಲೆ ಎಂಬುದು ಗಲಾಟೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಮೇ.೩)**

**ನಕಲಿ** : (ಗುಣಪದ) ಅರೆಬ್ಬಿ ಮೂಲದಿಂದ ಬಂದಿದೆ. ೧) ಅನುಕರಣೀಯ, ಕೃತಕವಾದ, ೨) ಬರವಣಿಗೆ, ಹಸ್ತ ಪ್ರತಿಚಿತ್ರ, ಮೊದಲಾದವುಗಳ ಪ್ರತಿಕೃತಿ, ಎರಡನೇ ಪ್ರತಿ, ದ್ವಿಪ್ರತಿ, ೩) ಅನುಕರಣೆಯಿಂದ ಕೂಡಿರುವ ಅಣಕ, ಹಾಸ್ಯ, ವಿನೋದ ಎಂಬ ಅರ್ಥವನ್ನು ಕೊಡುತ್ತದೆ. ಅರೆಬ್ಬಿಕ್ ಹಾಗೂ ಪಾರಸಿಯಲ್ಲಿ ನಕ್ಲ್, ನಕ್ಲೀ ಎಂದು, ಹಿಂದಿ, ಮರಾಠಿಯಲ್ಲಿ ನಕಲ್, ನಕಲೀ ಎಂದು ಬಳಕೆಯಾಗಿದೆ.
ಪ್ರಯೋಗ – 'ನಕಲಿ ಛಾಪಾ ಕಾಗದ ಹಗರಣ: ಇಂದು ವಿಶೇಷ ನ್ಯಾಯಾಲಯದಲ್ಲಿ ವಿಚಾರಣೆ'. ಇಲ್ಲಿ ದ್ವಿಪ್ರತಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಉದಯವಾಣಿ, ಜೂ.೨)**

**ನಾಪತ್ತೆ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ಕಾಣೆಯಾಗುವುದು, ಕಳೆದು ಹೋಗಿರುವುದು, ತಪ್ಪಿಸಿಕೊಂಡಿರುವುದು ಎಂಬ ಅರ್ಥಗಳನ್ನು ಹೊಂದಿದೆ. ಹಿಂದಿ ಹಾಗೂ ಮರಾಠಿಯಲ್ಲಿ ನಾಪತಾ ಎಂದು ಬಳಕೆಯಾದರೆ, ಕನ್ನಡದಲ್ಲಿ ದೀರ್ಘಾಕ್ಷರವನ್ನು ಕಳೆದುಕೊಂಡು 'ಎ' ಕಾರಂತ್ಯದೊಂದಿಗೆ ನಾಪತ್ತೆ ಎಂದು ಬಳಕೆಯಾಗಿದೆ.
ಪ್ರಯೋಗ – 'ಯುವತಿ ನಾಪತ್ತೆ'. ಇಲ್ಲಿ ನಾಪತ್ತೆ ಎಂಬ ಪದವು ಕಾಣೆಯಾಗು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೬)**

**ನಾಲೆ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ೧) ನೀರು ಹರಿಯುವುದಕ್ಕಾಗಿ ಮಾಡಿದ ತಗ್ಗು, ತೋಡು, ಕಾಲುವೆ ೨) ಬಂದೂಕಿನ

ನಳಿಕೆ ಎಂಬ ಅರ್ಥವನ್ನು ಕೊಡುತ್ತದೆ. ಹಿಂದಿ, ಮರಾಠಿಯಲ್ಲಿ ನಾಲಾ ಎಂದು, ಕನ್ನಡದಲ್ಲಿ ನಾಲೆ, ನಾಲಾ ಎಂದು ಬಳಕೆಯಾಗಿದೆ.
ಪ್ರಯೋಗ – 'ವರ್ಷಾಂತ್ಯದೊಳಗೆ ಭದ್ರ ನಾಲೆ ನವೀಕರಣ'. ಇಲ್ಲಿ ನೀರು ಹರಿಯುವ ತಗ್ಗು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಉದಯವಾಣಿ, ಜೂ.೨)**

**ನಿಗಾ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ೧)ಲಕ್ಷ್ಯ, ಗಮನ ೨) ಹೊಣೆ, ಜವಾಬ್ದಾರಿ, ಬಾಧ್ಯತೆ ಎಂಬ ಅರ್ಥಗಳನ್ನು ಹೊಂದಿದೆ. ಮರಾಠಿಯಲ್ಲಿ ನಿಗಾ, ಪಾರಸಿ, ಹಿಂದಿಯಲ್ಲಿ ನಿಗಾಹ್ ಎಂದು ಬಳಕೆಯಾದರೆ, ಕನ್ನಡದಲ್ಲಿ ನಿಗಾ ಎಂದು ಯಥಾವತ್ತಾಗಿ ಬಳಕೆಯಾಗಿದೆ.
ಪ್ರಯೋಗ – 'ಉದ್ಯೋಗ ಖಾತ್ರಿ ಯೋಜನೆ ಜಾರಿ ನಿಗಾಕ್ಕೆ ಅಂತರ್ಜಾಲ'. ಇಲ್ಲಿ ಗಮನ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂ.ಕರ್ನಾಟಕ, ಜೂ.೨)**

**ನೆಟ್‌ವರ್ಕ್:** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಕಾರ್ಯದ ವ್ಯಾಪ್ತಿ, ಕಾರ್ಯದ ಮಿತಿ ಎಂಬ ಅರ್ಥಗಳನ್ನು ಹೊಂದಿದೆ. ಇಂಗ್ಲೀಷ್‌ನಲ್ಲಿ 'Network' ಎಂದು ಬಳಕೆಯಾಗಿದೆ.
ಪ್ರಯೋಗ – 'ನೆಟ್‌ವರ್ಕ್ ವ್ಯವಹಾರ'

**ನೋಟಿಸ್:** (ನಾಮಪದ) ಇಂಗ್ಲೀಷ್ ಪದವಾಗಿದ್ದು, ೧)ಸೂಚನಾ ಪತ್ರ, ತಿಳುವಳಿದೆ ಪತ್ರ, ಎಚ್ಚರಿಕೆ ಪತ್ರ ೨) ಪ್ರಕಟಣೆ, ಜಾಹೀರಾತು ಎಂಬ ಅರ್ಥವನ್ನು ಕೊಡುತ್ತದೆ. ಇಂಗ್ಲೀಷ್ – Notice ಎಂದು ಬಳಕೆಯಾಗಿದೆ.
ಪ್ರಯೋಗ – 'ಆಂಗ್ಲ ಮಾಧ್ಯಮದಲ್ಲಿ ಶಾಲೆ: ಕೋರ್ಟ್ ನೋಟಿಸ್'. ಇಲ್ಲಿ ನೋಟಿಸು ಎಂಬುದು ಎಚ್ಚರಿಕೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಮೇ.೨೭)**

**ನೌಕರ** : (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ವೇತನವನ್ನು ಪಡೆದು ಸೇನಾ ವೃತ್ತಿಯಲ್ಲಿರುವವನು, ಚಾಕರ ಎಂಬ ಅರ್ಥವನ್ನು ಹೊಂದಿದೆ. ಪಾರಸಿ, ಹಿಂದಿಯಲ್ಲಿ ನೌಕರ್ ಎಂದು, ಮರಾಠಿಯಲ್ಲಿ ನೋಕರ್, ನೌಕರ್ ಎಂದು ಬಳಕೆಯಾಗಿದೆ. ಕನ್ನಡದಲ್ಲಿ ನೌಕರ, ನವುಕರ ಎಂದು ಬಳಕೆಯಾಗಿದೆ.
ಪ್ರಯೋಗ – 'ಸೂಡಾನ್ ಅಪಹರಣಕಾರರಿಂದ ಭಾರತೀಯ ನೌಕರ ಪರಾರಿ'. ಇಲ್ಲಿ ಸೇನಾ ವೃತ್ತಿಯಲ್ಲಿರುವವ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂ.ಕರ್ನಾಟಕ, ಜೂ.೬)**

**ಪಲ್ಟಿ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು, ತಲೆಕೆಳಗಾಗುವಿಕೆ, ಲಾಗ, ಉರುಳುವಿಕೆ ಎಂಬ ಅರ್ಥಗಳನ್ನು ಕೊಡುತ್ತದೆ. ಮರಾಠಿ – ಪಲಟೀ, ಪಲಟಾ, ತಮಿಳು – ಪಲ್ಟಿ, ತೆಲುಗು – ಪಲ್ಟಿ, ಪಲ್ಲಟ, ಕನ್ನಡ – ಪರಟಿ, ಪೈಟಿ, ಪಲ್ಟಿ ಎಂದು ಬಳಕೆಯಾಗುತ್ತದೆ.

ಪ್ರಯೋಗ – 'ಟ್ರ್ಯಾಕ್ಟರ್ ಟ್ರ್ಯಾಲಿ ಪಲ್ಟಿ ೭ ಜನರಿಗೆ ಗಾಯ'. ಇಲ್ಲಿ ಪಲ್ಟಿ ಎಂಬ ಪದವು ಉರುಳು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ.

**ಪಹರೆ** : (ನಾಮಪದ) ಹಿಂದಿ ಮೂಲ. ಇದು ಕಾವಲು, ಗಸ್ತು, ಕಾವಲುಗಾರ, ಮೂರು ಗಂಟೆಗಳ ಅವಧಿ ಜಾವ ಎಂಬ ಅರ್ಥಗಳನ್ನು ಕೊಡುತ್ತದೆ. ಹಿಂದಿ – ಪಹರಾ, ಮರಾಠಿ – ಪಹರಾ, ಸಂಸ್ಕೃತ – ಪ್ರಹರ ಎಂದು ಬಳಕೆಯಾಗಿದೆ.

ಪ್ರಯೋಗ – 'ಎಲ್ಲೆಲ್ಲೂ ಪೊಲೀಸ್ ಪಹರೆ' ಇಲ್ಲಿ ಪಹರೆ ಎಂಬ ಪದ 'ಕಾವಲು' ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಕನ್ನಡಪ್ರಭ. ಮೇ. ೧೭).**

**ಪಿತೂರಿ** : (ನಾಮಪದ) ಮರಾಠಿ ಮೂಲದಿಂದ ಬಂದದ್ದು/
ಅರ್ಥ – ಒಳಸಂಚು, ಕುತಂತ್ರ, ಹೋಲಿಸಿ, ಫಿದವಿ. ಮರಾಠಿಯಲ್ಲಿ ಫಿತವಾ, ಫಿತಾವಾ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ತಮ್ಮ ನಾಯಕತ್ವದ ವಿರುದ್ಧ ಪಕ್ಷದೊಳಗೆ ಪಿತೂರಿ'? ಖರ್ಗೆ. ಇಲ್ಲಿ ಈ ಪದವು ಒಳಸಂಚು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಕನ್ನಡಪ್ರಭ, ಮೇ. ೨೮)**

**ಪೊಲೀಸ್**: (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು, ೧)ಸಾರ್ವಜನಿಕರಿಗೆ ಸಂಬಂಧಪಟ್ಟಂತೆ ಶಾಂತಿ ಪಾಲನೆ, ರಕ್ಷಣೆಯನ್ನು ಕೈಗೊಳ್ಳುವ ಸರ್ಕಾರದ ಒಂದು ಖಾತೆ, ರಕ್ಷಣಾ ಇಲಾಖೆ, ೨) ಇಲಾಖೆಯ ಅಧಿಕಾರಿಗಳ ವರ್ಗ ಎಂಬ ಅರ್ಥಗಳನ್ನು ಕೊಡುತ್ತದೆ.

ಪ್ರಯೋಗ – 'ನಿಷ್ಕ್ರೀಯ ಪೊಲೀಸ್'. ಇಲ್ಲಿ ಅಧಿಕಾರಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಮೇ.೧೬)**

**ಪೋರಾ** : (ನಾಮಪದ) ಮರಾಠಿ ಮೂಲದಿಂದ ಬಂದಿದೆ.
ಅರ್ಥ – ಹುಡುಗ, ತುಂಟ ಎಂಬ ಅರ್ಥಗಳನ್ನು ಕೊಡುತ್ತದೆ. ಮರಾಠಿಯಲ್ಲಿ 'ಪೋರ' ಎಂದು ಬಳಕೆಯಲ್ಲಿದೆ.

ಪ್ರಯೋಗ – '೧೦ ವರ್ಷದ ಪೋರನಿಂದ ಮತದಾನಕ್ಕೆ ಯತ್ನ' ಇಲ್ಲಿ ಪೋರ ಎಂಬ ಪದವು ಹುಡುಗ ಎಂಬ ಅರ್ಥದಲ್ಲಿ ಬಳಕೆಯಾಗಿದೆ. **(ಕನ್ನಡಪ್ರಭ, ಮೇ. ೧೭)**

**ಬಂದ್** : (ನಾಮಪದ) ಹಿಂದಿಮೂಲ. ಅರ್ಥ –೧) ಬಂಧನ, ಸೆರೆ ೨) ಬೇಡಿ, ಸಂಕೋಲೆ, ೩) ಮುಚ್ಚಿದುದು, ನಿಲ್ಲಿಸಿದುದು ೪) ಹರತಾಳ, ಮುಷ್ಕರ. ಪಾರಸಿ, ಹಿಂದಿ – ಬಂದ್, ಮರಾಠಿ – ಬಂದ್, ಸಂಸ್ಕೃತ – ಬಂಧ, ಕನ್ನಡ – ಬಂದು, ಬಂದ್.

ಪ್ರಯೋಗ – 'ಚಲಿ ಪ್ರವಾಹ : ತಾಮ್ರದ ಗಣಿ ಬಂದ್" ಇಲ್ಲಿ ಬಂದ್ ಎಂಬ ಪದವು ಮುಚ್ಚಿದುದು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಕನ್ನಡಪ್ರಭ, ಮೇ. ೨೫)**

**ಬಾಕಿ** : (ಗುಣಪದ) ಹಿಂದಿ ಮೂಲದಿಂದ ಬಂದಿದೆ.

ಅರ್ಥ – ಉಳಿದ, ಕೊಡಬೇಕಾದ, ಇತರ, ಶೇಷ, ಉಳಿದುದು, ಮಿಕ್ಕಿದ್ದು, ಶಿಲ್ಕು, ಅರಬಿ, ಹಿಂದಿ, ಮರಾಠಿ ಭಾಷೆಯಲ್ಲಿ 'ಬಾಕೀ' ಎಂದು ಬಳಕೆಯಾಗುತ್ತದೆ.

ಪ್ರಯೋಗ – 'ಬಾಕಿ ಮೊತ್ತಕ್ಕೆ ಪೊಲೀಸರ ತಾಕೀತು' ಇಲ್ಲಿ ಬಾಕಿ ಎಂಬ ಪದವು ಉಳಿದ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಕನ್ನಡಪ್ರಭ, ಮೇ. ೨೫)**

**ಬ್ರೇಕ್** : (ನಾಮಪದ) ಇಂಗ್ಲೀಷ್ ಪದವಾಗಿದ್ದು, ತಡೆ, ನಿಲ್ಲಿಸು, ಅಡ್ಡಿ ಮಾಡು, ಚಲನೆಗೆ ಅವಕಾಶ ಕೊಡದಿರು ಎಂಬ ಅರ್ಥವನ್ನು ಕೊಡುತ್ತದೆ.

ಪ್ರಯೋಗ – 'ಗಣಿಧಣಿಗಳ ಕುರುಕ್ಷೇತ್ರಕ್ಕೆ ಪೀಟರ್ ಬ್ರೇಕ್' ಇಲ್ಲಿ ತಡೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಕ.ಪ್ರಭ, ಮೇ.೨೭)**

**ಮಸಲತ್ತು** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ಒಳಸಂಚು, ಪಿತೂರಿ, ಮೋಸ ಮುಂತಾದ ಅರ್ಥಗಳನ್ನು ಹೊಂದಿದೆ. ಅರೆಬ್ಬಿಕ್‌ನಲ್ಲಿ ಮಸಲಹತ್, ಮರಾಠಿ ಮಸಲತ್, ಮಸ್ಲತ್, ಹಿಂದಿಯಲ್ಲಿ ಮಸಲಹತ್ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜ್ಯನ್ಯಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯವಾಗಿ ಮಸಲತ್ತು ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಅನುದಾನ ತಡೆಗೆ ಶಾಸಕರ ಮಸಲತ್ತು'. ಇಲ್ಲಿ ಮಸಲತ್ತು ಎಂಬ ಪದವು ಪಿತೂರಿ, ಒಳಸಂಚು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೩)**

**ಮಿಲಿಟರಿ** : (ಗುಣಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ೧) ಸೈನ್ಯಕ್ಕೆ ಸಂಬಂಧಿಸಿದ, ದಂಡಿನ ೨) ಸೈನ್ಯ, ದಂಡು ಏಂಬ ಅರ್ಥಗಳನ್ನು ಕೊಡುತ್ತದೆ. ಇಂಗ್ಲೀಷ್‌ನಲ್ಲಿ 'Millitary' ಎಂದು ಬಳಕೆಯಾಗಿದೆ.

ಪ್ರಯೋಗ – 'ಮಿಲಿಟರಿ ಸಮಾರಂಭದ ವೇಳೆ ಕುಸಿದು ಬಿದ್ದ ಆ್ಯಂಟನಿ'.

ಇಲ್ಲಿ ಸೈನ್ಯಕ್ಕೆ ಸಂಬಂಧಿಸಿದ ಕಾರ್ಯಕ್ರಮ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಉದಯವಾಣಿ, ಜೂ.೧)**

**ಮ್ಯಾಚ್‌ಫಿಕ್ಸ್** :(ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು ಮುಂಚಿನ ಮಾತುಕತೆ, ಮೊದಲೇ ಮಾಡಿಕೊಂಡ ಒಪ್ಪಂದ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ.
ಪ್ರಯೋಗ – 'ಮ್ಯಾಚ್‌ಫಿಕ್ಸಿಂಗ್ ಕೆಲಸ ಮಾಡಿಲ್ಲ-ಹೊರಟ್ಟಿ' ಇಲ್ಲಿ ಮುಂಚಿತವಾಗಿ ಮಾಡಿಕೊಂಡ ಒಪ್ಪಂದ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಕ.ಪ್ರಭ, ಮೇ.೨೬)**

**ರದ್ದು** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ತೆಗೆದು ಹಾಕುವಿಕೆ, ವಜಾ ಮಾಡುವಿಕೆ, ನಿಲ್ಲಿಸುವಿಕೆ, ತಡೆಗೊಳಿಸು ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿ, ಹಿಂದಿ, ಮರಾಠಿಯಲ್ಲಿ ರದ್ದ್, ರದ್ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯವನ್ನು ಪಡೆದುಕೊಂಡಿದೆ.
ಪ್ರಯೋಗ – 'ಶಾಲೆಗಳ ಮಾನ್ಯತೆ ರದ್ದು'. ಇಲ್ಲಿ ನಿಲ್ಲಿಸು, ತಡೆಹಿಡಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೧)**

**ರಫ್ತು** : (ನಾಮಪದ) ಪಾರಸಿ ಮೂಲದಿಂದ ಬಂದ ಪದವಾಗಿದ್ದು, ದೇಶದಿಂದ ಹೊರಕ್ಕೆ ಕಳುಹಿಸುವುದು, ರವಾನೆ, ನಿರ್ಯಾತ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಪಾರಸಿ, ಹಿಂದಿ, ಮರಾಠಿಯಲ್ಲಿ ರಫ್ತ್ ಎಂದು ಬಳಕೆಯಾದರೆ, ಕನ್ನಡದಲ್ಲಿ ರಫ್ತು ಎಂದು ಬಳಕೆಯಾಗುತ್ತದೆ.
ಪ್ರಯೋಗ – 'ಹತ್ತಿ ಉತ್ಪಾದನೆ ರಫ್ತಿನಲ್ಲಿ ಚೀನಾ ನಂ.೧' ಇಲ್ಲಿ ಕಳುಹಿಸು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಮೇ.೧)**

**ರಸ್ತೆ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ದಾರಿ, ಮಾರ್ಗ, ಬೀದಿ ಎಂಬ ಅರ್ಥಗಳನ್ನು ಕೊಡುತ್ತದೆ. ಪಾರಸಿಯಲ್ಲಿ ರಸ್ತಾಹ್, ಹಿಂದಿ, ಮರಾಠಿಯಲ್ಲಿ ರಾಸ್ತಾ, ರಸ್ತಾ, ಸಂಸ್ಕೃತ – ರಥ್ಯ, ಕನ್ನಡದಲ್ಲಿ ರಸ್ತೆ, ರಸ್ತಾ ಎಂದು ಬಳಕೆಯಾಗಿದೆ.
ಪ್ರಯೋಗ – 'ರಸಗೊಬ್ಬರ ಕೊರತೆ ರಸ್ತೆ ತಡೆ : ವಾಗ್ವಾದ'. ಇಲ್ಲಿ ದಾರಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಉದಯವಾಣಿ, ಜೂ.೫)**

**ರಹದಾರಿ** : (ನಾಮಪದ) ಪಾರಸಿ ಮೂಲದಿಂದ ಬಂದಿದ್ದು, ೧) ರಸ್ತೆ, ಮಾರ್ಗ ೨) ಅನುಮತಿ, ಒಪ್ಪಿಗೆ, ಪರವಾನಿಗೆ ಎಂಬ ಅರ್ಥಗಳನ್ನು ಹೊಂದಿದೆ. ಪಾರಸಿಯಲ್ಲಿ ರಹದಾರಿ ಎಂದು, ಮರಾಠಿಯಲ್ಲಿ ರಹದಾರೀ ಎಂದು ಬಳಕೆಯಾದರೆ, ಕನ್ನಡದಲ್ಲಿ ದೀರ್ಘಾಕ್ಷರವನ್ನು ಕಳೆದುಕೊಂಡು ರಹದಾರಿ

ಎಂದು ಬಳಕೆಯಾಗಿದೆ.

ಪ್ರಯೋಗ – 'ಹದಗೆಟ್ಟ ಹೆದ್ದಾರಿ ಅಪಘಾತಕ್ಕೆ ರಹದಾರಿ'. ಇಲ್ಲಿ ಅನುಮತಿ, ಪರವಾನಿಗೆ ಎಂಬ ಅರ್ಥದಲ್ಲಿ ಈ ಪದ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೭)**

**ರಿಯಾಯ್ತಿ:** (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ಬಿಟ್ಟುಕೊಡುವುದು, ಬಿಡುಗೆ, ಸೋಡಿ, ವಟ್ಟ ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿಕ್‌ನಲ್ಲಿ ರಿಆಯತ್, ಹಿಂದಿಯಲ್ಲಿ ರಿಯಾಯತ್, ರಿಆಯತ್ ಎಂದು ಬಳಕೆಯಾದರೆ, ಕನ್ನಡದಲ್ಲಿ ರಿಯಾಯಿತಿ, ರಿಯಾಯ್ತಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಬಿತ್ತನೆ ಬೀಜ ಶೇ.೫೦ ರಿಯಾಯ್ತಿ ದರ'. ಇಲ್ಲಿ ಬಿಡುಗೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂ.ಕರ್ನಾಟಕ, ಜೂ.೪)**

**ರೈಲು :** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಕಂಬಿಗಳ ಮೇಲೆ ಅಥವಾ ವಿದ್ಯುತ್ತಿನ ಸಹಾಯದಿಂದ ಚಲಿಸುವ ಗಾಡಿ, ಬಂಡಿ, ಟ್ರೈನು, ಉಗಿಬಂಡಿ ಮುಂತಾದ ಅರ್ಥಗಳನ್ನು ಕೊಡುತ್ತದೆ. ಇಂಗ್ಲೀಷಿನ 'Rail' ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಗುಜ್ಜರ ಚಳುವಳಿ ರೈಲು ಸಂಚಾರ ಅಸ್ತವ್ಯಸ್ತ'. ಇಲ್ಲಿ ರೈಲು ಎಂಬ ಪದವು ಇಂಗ್ಲೀಷಿನಿಂದ ಬಂದಿದ್ದರೂ ಅದು ಕನ್ನಡದ್ದೇ ಎನ್ನುವಷ್ಟರ ಮಟ್ಟಿಗೆ ಕನ್ನಡೀಕರಣಗೊಂಡಿದೆ. **(ಉದಯವಾಣಿ, ಜೂ.೪)**

**ಲಗನ್ :** (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ಹಿಂದು ಕ್ಯಾಲೆಂಡರ್‌ನಲ್ಲಿ ಮದುವೆಗಳು ಆರಂಭಗೊಳ್ಳುವ ಶುಭಕಾಲ ಎಂಬ ಅರ್ಥಗಳನ್ನು ಹೊಂದಿದೆ. ಮರಾಠಿ, ಹಿಂದಿಯಲ್ಲಿ ಲಗನ್ ಎಂದು ಬಳಕೆಯಾದರೆ ಕನ್ನಡದಲ್ಲಿ ಯಥಾವತ್ತಾಗಿ ಬಳಕೆಯಾಗಿದೆ.

ಪ್ರಯೋಗ – 'ಲಾಲೂ ಲಗನ್ ಮದುವೆಗೆ ಮುಹೂರ್ತ ಬೇಕಿಲ್ಲ' ಇಲ್ಲಿ ಶುಭಕಾಲ, ಶುಭಘಳಿಗೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೨)**

**ಲಡಾಯಿ :** (ನಾಮಪದ) ಹಿಂದಿ ಮೂಲದಿಂದ ಬಂದಿದ್ದು, ಯುದ್ಧ, ಕಾಳಗ, ಜಗಳ ಎಂಬ ಅರ್ಥಗಳನ್ನು ಕೊಡುತ್ತದೆ. ಹಿಂದಿಯಲ್ಲಿ ಲಡಾಈ, ಮರಾಠಿಯಲ್ಲಿ ಲಡಾಈ, ಲಢಾಈ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಲಾಡ್‌ರಡ್ಡಿ ಲಡಾಯಿ' **(ಪ್ರಜಾವಾಣಿ, ಮೇ.೩)**

**ಲಾಭಿ :** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಪರಸ್ಪರ, ಪ್ರಭಾವ ಬೀರುವ ವ್ಯಕ್ತಿಗಳ ಗುಂಪು ಹೆಚ್ಚಾಗಿ ರಾಜಕೀಯ ಪ್ರಭಾವ ಅರ್ಥವನ್ನು

ಕೊಡುತ್ತದೆ. ಇಂಗ್ಲೀಷಿನಲ್ಲಿ 'Lobby' ಎಂದು ಬಳಕೆಯಲ್ಲಿದೆ.
ಪ್ರಯೋಗ – 'ಮಂತ್ರಿಗಳಿಗೆ ಗನ್‌ಮ್ಯಾನ್ ಆಗಲು ಭಾರೀ ಲಾಭಿ'. ಇಲ್ಲಿ ಲಾಭಿ ಪದವು ರಾಜಕೀಯ ಪ್ರಭಾವ ಎನ್ನುವ ಅರ್ಥದಲ್ಲಿ ಪ್ರಯೋಗವಾಗಿದೆ. **(ಉದಯವಾಣಿ, ಜೂ.೩)**

**ಲಾರಿ** : (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಸಾಮಾನು ಸರಂಜಾಮುಗಳನ್ನು ಸಾಗಿಸುವ ಮೋಟಾರು ಬಂಡಿ ಎಂಬ ಅರ್ಥವನ್ನು ಕೊಡುತ್ತದೆ. ಇಂಗ್ಲೀಷ್‌ನಲ್ಲಿ 'Lorry' ಎಂದು ಬಳಕೆಯಲ್ಲಿದೆ.
ಪ್ರಯೋಗ – 'ಲಾರಿ ಅಪಘಾತ ಇಬ್ಬರ ಸಾವು'. ಲಾರಿ ಎಂಬ ಪದಕ್ಕೆ ಕನ್ನಡದಲ್ಲಿ ಪರ್ಯಾಯ ಪದವಿದ್ದರೂ ಲಾರಿ ಕನ್ನಡದ್ದೇ ಎನ್ನುವಷ್ಟರ ಮಟ್ಟಿಗೆ ಸಹಜವಾಗಿ ಬಳಕೆಯಾಗುತ್ತದೆ. **(ಉದಯವಾಣಿ, ಜೂ.೧)**

**ಲೂಟಿ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು, ಕೊಳ್ಳೆಹೊಡೆ, ದೋಚು, ಸುಲಿಗೆ, ದರೋಡೆ, ಕಳ್ಳತನ ಎಂಬ ಅರ್ಥಗಳನ್ನು ಕೊಡುತ್ತದೆ. ಹಿಂದಿಯಲ್ಲಿ ಲೂಟ್, ಲೂಟಿ ಎಂದು, ಮರಾಠಿಯಲ್ಲಿ ಲೂಟ್/ಇಂಗ್ಲೀಷ್ Loot ಎಂದು ಬಳಕೆಯಲ್ಲಿದೆ.
ಪ್ರಯೋಗ – 'ಶಿಕಾರಿ ಪುರದಲ್ಲಿ ನಡಿದಿರೋದು ಅಭಿವೃದ್ಧಿಯಲ್ಲ ಲೂಟಿ' **(ಪ್ರಜಾವಾಣಿ, ಮೇ.೧)**

**ವರ್ಚಸ್ಸು** : (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದೆ. ಹೆಸರು, ವ್ಯಕ್ತಿತ್ವ, ಪ್ರತಿಷ್ಠೆ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ.
ಪ್ರಯೋಗ – 'ಶ್ರೀರಾಮುಲು ವರ್ಚಸ್ಸು ಬಿ.ಜೆ.ಪಿ.ಗೆ ಪ್ಲಸ್' ಇಲ್ಲಿ ವ್ಯಕ್ತಿತ್ವ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಕ.ಪ್ರಭ, ಮೇ. ೨೬)**

**ವಾಪಾಸ್** : (ಅ) ಪಾರಸಿ ಮೂಲದಿಂದ ಬಂದ ಪದವಾಗಿದ್ದು, ಮತ್ತೇ, ತಿರುಗಿ, ಪುನ: ಎಂಬ ಅರ್ಥದಲ್ಲಿ ಬಳಸಲಾಗುತ್ತದೆ. ಪಾರಸಿ, ಹಿಂದಿ, ಮರಾಠಿಯಲ್ಲಿ ವಾಪಸ್ ಎಂದು ಕನ್ನಡದಲ್ಲಿ ವಾಪಾಸ್ ಎಂದು ಬಳಕೆಯಾಗುತ್ತದೆ.
ಪ್ರಯೋಗ – 'ಬಂಡಾಯ ಅಭ್ಯರ್ಥಿಗಳ ನಾಮಪತ್ರ ವಾಪಾಸ್' ಇಲ್ಲಿ ತಿರುಗಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಮೇ.೩)**

**ಸರ್ಕಾರ** : (ನಾಮಪದ) ಹಿಂದಿ ಮೂಲದಿಂದ ಬಂದಿದೆ. ಅರ್ಥ : ರಾಜ್ಯದ ಆಡಳಿತ ನಡೆಸುವ ಸಂಸ್ಥೆ. ಪಾರಸಿ, ಹಿಂದಿ, ಮರಾಥಿ, ಸರ್ಕಾರ್, ಸರಕಾರ್ ಎಂದು ಬಳಕೆಯಾಗಿದೆ.
ಪ್ರಯೋಗ : 'ಸರ್ಕಾರಕ್ಕೆ ಹೈಕೋರ್ಟ್ ತರಾಟೆ' ಇಲ್ಲಿ ಸರ್ಕಾರ ಎಂಬ ಪದವು ಒಂದು ಸಂಸ್ಥೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಕನ್ನಡಪ್ರಭ. ಮೇ. ೨೩)**

**ಸವಾಲು :** (ನಾಮಪದ) ಪಾರಸಿ ಮೂಲದಿಂದ ಬಂದದ್ದು, ಕೇಳುವಿಕೆ, ಪ್ರಶ್ನೆ, ವಿಚಾರಣೆ (ವಿವಾದಕ್ಕೆ ಕರೆಯುವುದು) ಸವಾಲು, ಆಹ್ವಾನ ಎಂಬ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಪಾರಸಿ – ಸುವಾಲ್, ಸುಅಲ್, ಹಿಂದಿ, ಮರಾಠಿಯಲ್ಲಿ ಸವಾಲ್ ಎಂದು ಅರೆಬ್ಬಿಕ್‌ನಲ್ಲಿ ಸುಆಲ್, ಸವಾಲ್ ಎಂದು ಬಳಕೆಯಲ್ಲಿದೆ. ಪ್ರಯೋಗ – 'ಬೆಳ್ತಂಗಡಿ–ಧಾರವಾಡದಲ್ಲಿ ಸಹೋದರರ ಸವಾಲು' ಇಲ್ಲಿ ಆಹ್ವಾನ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಪ್ರಜಾವಾಣಿ, ಮೇ.೧**)

**ಸಸ್ಪೆಂಡ್ :** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು, (Suspend– ಹಂಗಾಮಿ) ತಾತ್ಕಾಲಿಕವಾಗಿ ಕೆಲಸದಿಂದ ರದ್ದುಗೊಳಿಸುವಿಕೆ, ಹಂಗಾಮಿಯಾಗಿ ನೌಕರಿಯಿಂದ ತೆಗೆದು ಹಾಕುವಿಕೆ, ಯಾವುದಾದರೂ ತಾತ್ಕಾಲಿಕ ನಿಲುಗಡೆ ಎಂಬ ಅರ್ಥಗಳನ್ನು ಕೊಡುತ್ತದೆ.
ಪ್ರಯೋಗ – 'ತಹಶೀಲ್ದಾರ್, ಇ.ಓ.ಸಸ್ಪೆಂಡ್'. ಇಲ್ಲಿ ನೌಕರಿಯಿಂದ ತೆಗೆದು ಹಾಕು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಪ್ರಜಾವಾಣಿ, ಮೇ.೧೭**)

**ಸಾಬೀತು :** (ನಾಮಪದ) ಪಾರಸಿ ಮೂಲದಿಂದ ಬಂದಿದ್ದು, ೧ನಿಜವೆಂದು ರುಜುವಾತು ಮಾಡಿದುದು, ಪ್ರಮಾಣೀಕರಿಸಿದುದು, ಸ್ಥಿರಪಡಿಸಿದುದು. ೨ಬಲವಾದುದು, ಗಟ್ಟಿಮುಟ್ಟಾದುದು, ಸ್ಥಿರವಾದುದು. ೩ಸುರಕ್ಷಿತವಾದುದು, ಹಾನಿಯಿಲ್ಲದ್ದು ಮುಮತಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ.
ಪಾರಸಿ – ಸಾಬಿತ್, ಸಬೂತ್, ಸಾಬೂತ್. ಹಿಂದಿ – ಸಾಬಿತ್, ಸಾಬುತ್, ಸಾಬೂತ್. ಮರಾಠಿ – ಸಾಬೀತ್, ಸಾಬೂತ್, ಶಾಬೀತ್, ಶಾಬುತ್, ಶಾಬೂತ್ ಎಂದು ಬಳಕೆಯಲ್ಲಿದೆ.
ಪ್ರಯೋಗ – 'ಬೇಕೆಂದೆ ಬೆಂಕಿ ಹಚ್ಚಿದ್ದು ಎಂದು ಸಾಬೀತು ಮಾಡಿದ ವಿಮಾ ಕಂಪನಿ'. ಇಲ್ಲಿ ನಿಜವೆಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಕ.ಪ್ರಭ, ಮೇ.೨೩**)

**ಸಿಂಪಲ್ :** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು, ಸರಳ, ಸಾದು ಎಂಬ ಅರ್ಥಗಳನ್ನು ಕೊಡುತ್ತದೆ.
ಪ್ರಯೋಗ – 'ಕಾಂಗ್ರೆಸ್‌ಗೆ ವೇರಿಸಿಂಪಲ್ ಬಹುಮತ – ಎಸ್ಸೆಂ' ಇಲ್ಲಿ ಬಹಳ ಸರಳ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಕ.ಪ್ರಭ, ಮೇ.೨೭**)

**ಸಿಪಾಯಿ :** (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ೧) ಸೈನಿಕ, ಯೋಧ ೨) ಪೊಲೀಸ್ ಪೇದೆ ೩) ಆಳು, ಜವಾನ ಎಂಬ ಅರ್ಥವನ್ನು ಹೊಂದಿದೆ. ಹಿಂದಿಯಲ್ಲಿ ಶಿಪಾಈ ಎಂದು ಬಳಕೆಯಾದರೆ, ಕನ್ನಡದಲ್ಲಿ ಸಿಪಾಯಿ,

ಶಿಪಾಯಿ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಸಿಪಾಯಿಗೂ ಮೊಬೈಲ್ ಕಡ್ಡಾಯ'. ಇಲ್ಲಿ ಸೈನಿಕ, ಯೋಧ ಎಂಬ ಅರ್ಥಗಳಲ್ಲಿ ಸಿಪಾಯಿ ಪದ ಪ್ರಯೋಗವಾಗಿದೆ. (**ಸಂ.ಕರ್ನಾಟಕ. ಜೂ.೪**)

**ಸುಸ್ತು** : (ನಾಮಪದ) ಮರಾಠಿ ಮೂಲದಿಂದ ಬಂದಿದೆ. ೧) ಚಲಿಸದಿರುವುದು, ಜಡತೆ, ಆಲಸ್ಯ ೨) ಆಯಾಸ, ಬಳಲಿಕೆ, ದಣಿವು ಎಂಬ ಅರ್ಥಗಳನ್ನು ಕೊಡುತ್ತದೆ. ಮರಾಠಿಯಲ್ಲಿ ಸುಸ್ತ್ ಎಂದು ಕನ್ನಡದಲಲಿ ಸುಸ್ತಿ, ಸುಸ್ತು ಎಂದು ಬಳಕೆಯಾಗಿದೆ.

ಪ್ರಯೋಗ – 'ಆಯೋಗದ ಪಟ್ಟಿಗೆ ಪಕ್ಷಗಳು ಸುಸ್ತೋಸುಸ್ತು' (**ಪ್ರಜಾವಾಣಿ, ಮೇ.೧**

**ಸ್ಪೀಡ್‌ಪೋಸ್ಟ್:** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ವೇಗದ ಅಂಚೆ ಎಂಬ ಅರ್ಥವನ್ನು ಹೊಂದಿದೆ. ಇಂಗ್ಲೀಷಿನಲ್ಲಿ 'Speedpost' ಎಂದು ಬಳಕೆಯಾಗಿದೆ.

ಪ್ರಯೋಗ – 'ಸ್ಪೀಡ್‌ಪೋಸ್ಟ್ ಸೇವೆ ಸುಧಾರಣೆಗೆ ವಿಮಾನ'. ಇಲ್ಲಿ ವೇಗ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಸಂ.ಕರ್ನಾಟಕ, ಜೂ.೨**)

**ಸ್ಲೀಪರ್ ಸೆಲ್** : (ನಾಮಪದ) ಇಂಗ್ಲೀಷ್ ಪದವಾಗಿದ್ದು ಮಲಗಿಕೊಂಡು ಪ್ರಯಾಣಿಸಲು ಇರುವ ಆಸನ ಎಂಬ ಅರ್ಥವನ್ನು ಕೊಡುತ್ತದೆ.

ಪ್ರಯೋಗ – 'ಸ್ಲಿಪರ್ ಸೆಲ್‌ನಲ್ಲಿ ಇನ್ನಷ್ಟು ಉಗ್ರರು. (**ಕ.ಪ್ರಭ, ಮೇ.೨೭**)

**ಹಮಾಲ** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು ಕೂಲಿ ಕೆಲಸ ಮಾಡುವವನು, ಆಳು, ಗಂಟುಮೂಟೆಗಳನ್ನು ಹೊರುವವ ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿಕ್‌ನಲ್ಲಿ ಅಮ್ಮಲ್, ಹಿಂದಿ ಹಾಗೂ ಮರಾಠಿಯಲ್ಲಿ ಹಮಾಲ್ ಎಂದು ಪ್ರಯೋಗವಾದರೆ, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಅ' ಕಾರಂತ್ಯವಾಗಿ ಹಮಾಲ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಹಮಾಲರ ಸಂಘ ಅಸ್ತಿತ್ವಕ್ಕೆ'. ಇಲ್ಲಿ ಕೂಲಿ ಕೆಲಸದವರು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ವಿ.ಕರ್ನಾಟಕ, ಜೂ.೩**)

**ಹಾಜರ್** : (ನಾಮಪದ) ಅರೆಬ್ಬಿ ಮೂಲದಿಂದ ಬಂದಿದ್ದು, ಇರುವಿಕೆ, ಉಪಸ್ಥಿತವಾಗುವಿಕೆ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ.
ಅರೆಬ್ಬಿ, ಹಾಝಿರ್, ಮರಾಠಿ – ಹಾಜೀರ್, ಹಿಂದಿ – ಹಾಜಿರ್ ಎಂದು ಬಳಕೆಯಾಗುತ್ತದೆ.

ಪ್ರಯೋಗ – 'ಬೆಳಿಗ್ಗೆ ೯.೪೫ ಕ್ಕೆ ಯಡಿಯೂರಪ್ಪ ಹಾಜರ್' ಇಲ್ಲಿ ಇರುವಿಕೆ ಎಂಬ ಅರ್ಥದಲ್ಲಿ ಪ್ರಯೋಗವಾಗುತ್ತದೆ. (**ಕ.ಪ್ರಭ, ಮೇ. ೧೭**)

**ಹಾಸ್ಟೆಲ್:** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ವಸತಿ ನಿಲಯ, ಬೋರ್ಡಿಂಗ್, ವಾಸಗೃಹ ಎಂಬ ಅರ್ಥಗಳನ್ನು ಹೊಂದಿದೆ. ಇಂಗ್ಲೀಷ್‌ನಲ್ಲಿ 'Hostel' ಎಂದು ಬಳಕೆಯಾಗಿದೆ.

ಪ್ರಯೋಗ – 'ಬಾಲಕರ ಹಾಸ್ಟೇಲ್ ಪ್ರಾರಂಭ'. ಇಲ್ಲಿ ವಸತಿ ನಿಲಯ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಸಂ.ಕರ್ನಾಟಕ, ಜೂ.೪**)

**ಹುದ್ದೆ :** (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದೆ. ೧ನೌಕರಿ, ಕೆಲಸ, ಉದ್ಯೋಗ ೨ಅಧಿಕಾರ, ಪದವಿ ಎಂಬ ಅರ್ಥಗಳನ್ನು ಕೊಡುತ್ತದೆ. ಅರೆಬ್ಬಿಕ್ – ಉದ್ದಾ, ಮರಾಠಿ – ಹುದ್ದಾ ಎಂದು ಕನ್ನಡದಲ್ಲಿ ಹುದ್ದೆ ಎಂದು ಬಳಕೆಯಾಗಿದೆ.

ಪ್ರಯೋಗ – 'ಮುಳ್ಳಿನ ಹಾಸಿಗೆಯಾದ ಎಸ್ಪಿ ಹುದ್ದೆ' ಇಲ್ಲಿ ಹುದ್ದೆ ಎಂಬ ಪದವು ಅಧಿಕಾರ ಎಂದು ಪ್ರಯೋಗವಾಗಿದೆ. (**ಪ್ರಜಾವಾಣಿ, ಮೇ.೧೭**)

**ಹುನ್ನಾರ :** (ನಾಮಪದ) ಪಾರಸಿ ಮೂಲದಿಂದ ಬಂದದ್ದು, ಯುಕ್ತಿ, ಉಪಾಯ, ಚಾತುರ್ಯ್ಯತೆ, ಕುಶಲತೆ, ಪಿತೂರಿ ಎಂಬ ಅರ್ಥವನ್ನು ಕೊಡುತ್ತದೆ. ಪಾರಸಿ – ಹುನರ್, ಹಿಂದಿ – ಹುನರ್, ಮರಾಠಿ – ಹುನ್ನರ್ ಎಂದು ಬಳಕೆಯಲ್ಲಿವೆ.

ಪ್ರಯೋಗ – 'ರಾಜ್ಯದಲ್ಲಿ ವಿಧಾನಸಭೆ ಚುನಾವಣೆಯಂತೆ ಲೋಕಸಭಾ ಮಧ್ಯಂತರ ಚುನಾವಣೆಗೆ ಹುನ್ನಾರ' ಇಲ್ಲಿ ಹುನ್ನಾರ ಎಂಬ ಪದವು ಪಿತೂರಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಪ್ರಜಾವಾಣಿ, ಮೇ.**

ಒಟ್ಟಾರೆಯಾಗಿ ಕನ್ನಡ ದಿನಪತ್ರಿಕೆಗಳ ಶೀರ್ಷಿಕೆಯಲ್ಲಿ ಬಳಕೆಯಾದ ಅನ್ಯಭಾಷಾ ಪದಗಳನ್ನು ಗಮನಿಸಿದಾಗ ಬಹುತೇಕ ಪದಗಳು ನಾಮಪದಗಳಾಗಿದ್ದು, ಕ್ರಿಯಾಪದ ಮತ್ತು ಗುಣಪದಗಳ ಬಳಕೆ ಕಡಿಮೆ ಎಂದು ಹೇಳಬಹುದು. ಈ ಮೇಲಿನ ಮಾತು ಎಲ್ಲಾ ದಿನ ಪತ್ರಿಕೆಗಳಿಗೂ ಅನ್ವಯಿಸುತ್ತದೆ. **'ಕನ್ನಡಪ್ರಭ'** ದಲ್ಲಿ ಅರಬ್ಬಿ, ಹಿಂದಿ, ಪಾರಸಿ ಪದಗಳು ಸಮಪ್ರಮಾಣದಲ್ಲಿ ಬಳಕೆಯಾದರೆ, ಮರಾಠಿ ಪದಗಳು ಹೆಚ್ಚು ಬಳಕೆಯಾದದ್ದು ಕಂಡು ಬಂದಿದೆ. ಇಂಗ್ಲೀಷ್ ಪದಗಳು ಶೇ. ೩೫ ರಷ್ಟು ಬಳಕೆಯಾಗಿದೆ. **'ಪ್ರಜಾವಾಣಿ'** ಯಲ್ಲಿ ಅರೆಬ್ಬಿ, ಮರಾಠಿ ಹಾಗೂ ಹಿಂದಿ ಪದಗಳು ಸಮಪ್ರಮಾಣದಲ್ಲಿ ಬಳಕೆಯಾದರೆ ಪಾರಸಿ ಪದಗಳ ಬಳಕೆ ಹೆಚ್ಚು ಎಂದು ಹೇಳಬಹುದು. ಇಂಗ್ಲೀಷ್ ಪದಗಳು ಶೇ.೧೨ ರಷ್ಟು ಬಳಕೆಯಾಗಿವೆ. **'ಉದಯವಾಣಿ'** ಯಲ್ಲಿ ಪಾರಸಿ, ಹಿಂದಿ ಪದಗಳು ಅತ್ಯಂತ

ಕಡಿಮೆ ಪ್ರಮಾಣದಲ್ಲಿ ಬಳಕೆಯಾದರೆ, ಮರಾಠಿ ಮತ್ತು ಅರೆಬ್ಬಿಕ್ ಪದಗಳು ಹೆಚ್ಚಾಗಿ ಬಳಕೆಯಾಗಿವೆ. ಇಂಗ್ಲೀಷ್ ಪದಗಳು ಶೇ. ೫೫ ರಷ್ಟು ಬಳಕೆಯಾಗಿವೆ ಹಾಗೂ **'ವಿಜಯಕರ್ನಾಟಕ'** ದಲ್ಲಿ ಅರೆಬ್ಬಿಕ್, ಮರಾಠಿ ಹಾಗೂ ಪಾರಸಿ ಪದಗಳು ಹೆಚ್ಚಿನ ಪ್ರಮಾಣದಲ್ಲಿ ಬಳಕೆಯಾಗಿದ್ದು, ಹಿಂದಿ ಪದಗಳ ಬಳಕೆ ಕಡಿಮೆ ಎಂದು ಹೇಳಬಹುದು. ಇಂಗ್ಲೀಷ್ ಪದಗಳು ಶೇ.೫೫ ರಷ್ಟು ಕಂಡು ಬಂದಿವೆ. **'ಸಂಯುಕ್ತ ಕರ್ನಾಟಕ'** ದಲ್ಲಿ ಅರೆಬ್ಬಿ, ಮರಾಠಿ ಹಾಗೂ ಹಿಂದಿ ಪದಗಳು ಸಮಪ್ರಮಾಣದಲ್ಲಿ ಬಳಕೆಯಾದರೆ, ಪಾರಸಿ ಪದಗಳ ಬಳಕೆ ಕಡಿಮೆ ಕಂಡು ಬಂದಿವೆ. ಇಂಗ್ಲೀಷ್ ಪದಗಳು ಶೇ.೪೮ ರಷ್ಟು ಬಳಕೆಯಾಗಿವೆ.

### ೩.೨. ಅಂಕಣಗಳಲ್ಲಿ ಅನ್ಯಭಾಷಾ ಬಳಕೆ

ಯಾವುದೇ ಒಂದು ವಸ್ತು, ವಿಷಯ, ಸಂಗತಿ ಅಥವಾ ಘಟನೆಗಳ ವಿವರಣಾತ್ಮಕ ವಿಶ್ಲೇಷಣೆಯನ್ನು ಒಳಗೊಂಡ ಬರಹವನ್ನು ಅಂಕಣ ಎಂದು ಕರೆಯಲಾಗುತ್ತದೆ. ಇದು ಹೆಚ್ಚು ಕಡಿಮೆ ಲೇಖನಗಳ ಸ್ವರೂಪವನ್ನೇ ಹೋಲುವಂತಿರುತ್ತದೆ. ಸಾಮಾನ್ಯವಾಗಿ ಅಂಕಣಗಳಿಗೆ ಪ್ರತ್ಯೇಕ ಓದುಗ ವರ್ಗವಿರುತ್ತದೆ. ಸಾಮಾನ್ಯ ಓದುಗರಿಂದ ಸಾಮಾಜಿಕ ಕಾಳಜಿ, ಜವಾಬ್ದಾರಿ ಇರುವಂತಹವರು ಹಾಗೂ ವಿಚಾರವಂತರು ಹೆಚ್ಚಾಗಿ ಅಂಕಣಗಳನ್ನು ಓದಲು ಇಷ್ಟ ಪಡುತ್ತಾರೆ.

ಪ್ರತಿಯೊಂದು ಕನ್ನಡದಿನ ಪತ್ರಿಕೆಗಳು ಅಂಕಣಗಳಿಗಾಗಿಯೇ ನಿರ್ದಿಷ್ಟ ಪುಟಗಳಲ್ಲಿ ಸ್ಥಳವನ್ನು ಕಲ್ಪಿಸಿರುತ್ತವೆ. ಅಂಕಣಗಳನ್ನು ಒಳಗೊಂಡಿರುವ ಪುಟಗಳು ಪತ್ರಿಕೆಯಿಂದ ಪತ್ರಿಕೆಗಳಿಗೆ ಬೇರೆಯಾಗಿರುತ್ತವೆ. ಆದರೆ ಅಂಕಣಗಳು ಮಾತ್ರ ಎಲ್ಲಾ ಕನ್ನಡ ದಿನಪತ್ರಿಕೆಗಳಲ್ಲಿ ಕಂಡು ಬರುತ್ತವೆ. ಅಂಕಣಗಳಿಲ್ಲದ ಪತ್ರಿಕೆಗಳೇ ಇಲ್ಲವೆಂದೇ ಹೇಳಬಹುದು.

ಜಾಗತಿಕ ವಿದ್ಯಮಾನಗಳು, ರಾಜ್ಯ, ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ಒಪ್ಪಂದಗಳು, ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ವಿಷಯಗಳನ್ನು ಒಳಗೊಂಡಂತೆ ಆಕಸ್ಮಿಕವಾಗಿ ಸಂಭವಿಸುವ ದುರಂತಗಳು ಅತಿವೃಷ್ಟಿ, ಅನಾವೃಷ್ಟಿಗಳು, ಆಂತರಿಕ ಹಾಗೂ ಬಾಹ್ಯವಾಗಿ ರಾಜ್ಯ – ದೇಶಗಳಿಗೆ ಬಂದಿರುವ ಆಪತ್ತುಗಳು, ಭಯೋತ್ಪಾದನೆ ಮುಂತಾದ ವಿಷಯಗಳು ಅಂಕಣಗಳ ವಸ್ತುಗಳಾಗಿರುತ್ತವೆ.

ಪ್ರತಿಯೊಂದು ಪತ್ರಿಕೆಗಳಲ್ಲಿ ಅಂಕಣಗಳನ್ನು ಬರೆಯುವುದಕ್ಕಾಗಿಯೇ ಖಾಯಂ ಅಂಕಣಕಾರರು (ಬರಹಗಾರರು) ಇದ್ದು, ಕೆಲವರು ತಮ್ಮ ಹೆಸರುಗಳ ಅಂಕಣದ ಪ್ರಾರಂಭದಲ್ಲಿ ಇನ್ನೂ ಕೆಲವರು ಅಂಕಣದ ಮಧ್ಯಭಾಗದಲ್ಲಿ ಆಕರ್ಷಕವಾಗಿ, ಮತ್ತೇ

ಕೆಲವರು ಅಂಕಣದ ಕೊನೆ ಭಾಗದಲ್ಲಿ (ಮುಕ್ತಾಯದ ನಂತರ) ಬರೆಯುತ್ತಾರೆ. ಖಾಯಂ ಅಂಕಣಕಾರರ ವಿಚಾರಗಳನ್ನು ಹಾಗೂ ಅವರ ವೈಚಾರಿಕ ಬರಹಗಳನ್ನು ಗಮನಿಸಲಾಗಿ, ಪ್ರತಿಯೊಬ್ಬ ಅಂಕಣಕಾರರ ಅಭಿಪ್ರಾಯ, ಅನಿಸಿಕೆಗಳು ಒಂದೊಂದು ಸೈದ್ಧಾಂತಿಕ ನೆಲೆಗಟ್ಟಿನ ಮೇಲೆ ಮೂಡಿಬರುತ್ತವೆ. ಅಂದರೆ ಕೆಲವು ಅಂಕಣಕಾರರ ವಿಚಾರಗಳು ಎಡಪಂಥೀಯ ವಿಚಾರಗಳಾಗಿದ್ದರೆ, ಇನ್ನೂ ಕೆಲವರ ವಿಚಾರಗಳು ಬಲಪಂಥೀಯವಾಗಿ ಕಂಡು ಬರುತ್ತವೆ. ಒಂದು ಹೆಜ್ಜೆ ಮುಂದೆ ಹೋಗಿ ನೋಡುವುದಾದರೆ, ಕೆಲವರು ಪ್ರಜಾಪ್ರಭುತ್ವದಲ್ಲಿ ಹೆಚ್ಚು ನಂಬಿಕೆಯಿಟ್ಟರೆ, ಮತ್ತೆ ಕೆಲವರು ಕಮ್ಯೂನಿಷ್ಟ ಸಿದ್ಧಾಂತಗಳಲ್ಲಿ ನಂಬಿಕೆಯುಳ್ಳವರಾಗಿ ಕಂಡು ಬರುತ್ತಾರೆ.

ಅಂಕಣಗಳ ಗಾತ್ರ ಚಿಕ್ಕದಾಗಿದ್ದು, ಒಟ್ಟು ಪುಟದ ಒಂದೆರಡು ಕಾಲಂನಷ್ಟಿರುತ್ತದೆ. ಕೆಲವೊಂದು ಅಂಕಣಗಳು ಅತೀ ಚಿಕ್ಕವಾಗಿದ್ದು, ಇನ್ನೂ ಕೆಲವು ಅಂಕಣಗಳು ಒಂದೆರಡು ಲೇಖನಗಳಷ್ಟು ದೊಡ್ಡದಾಗಿರುತ್ತವೆ. ಅತೀ ದೊಡ್ಡ ಗಾತ್ರದ ಅಂಕಣವೆಂದರೂ ಎರಡು, ಮೂರು ಸುದ್ದಿಗಳ ಗಾತ್ರದಷ್ಟಿರುತ್ತವೆ. ಅಂಕಣಗಳು ಗಾತ್ರದಲ್ಲಿ ಚಿಕ್ಕದಾಗಿದ್ದು, ಬುದ್ಧಿವಂತ ಓದುಗರನ್ನು ತನ್ನೆಡೆಗೆ ಸೆಳೆದುಕೊಳ್ಳುತ್ತವೆ.

ಅಂಕಣಗಳನ್ನು ಸಾಮಾನ್ಯವಾಗಿ ಸಾಮಾಜಿಕ ಅಂಕಣಗಳು, ರಾಜಕೀಯ ಅಂಕಣಗಳು, ಧಾರ್ಮಿಕ ಅಂಕಣಗಳು, ಆರ್ಥಿಕ ಅಂಕಣಗಳು, ಸಾಂಸ್ಕೃತಿಕ ಅಂಕಣಗಳು, ಸಾಹಿತ್ಯಿಕ ಅಂಕಣಗಳು, ಇತರೇ ಅಂಕಣಗಳೆಂದು ವಿಭಾಗ ಮಾಡಬಹುದು.

ಅಂಕಣಗಳಲ್ಲಿ ಬಳಕೆಯಾಗುವ ಭಾಷೆ ಸಾಮಾನ್ಯವಾಗಿ ಪ್ರಮಾಣಿತ ಭಾಷೆ ಬಳಕೆಯಾಗುತ್ತದೆ. ಅಲ್ಲಲ್ಲಿ ಅಗತ್ಯತೆ, ಅನಿವಾರ್ಯತೆಗಳಿಗನುಗುಣವಾಗಿ ಇಂಗ್ಲೀಷ್ ಪದಗಳ ಬಳಕೆಯೊಂದಿಗೆ ಆಧುನೀಕರಣದ ಭಾಷೆಯನ್ನು ಅವಲಂಬಿಸುವುದು ಕಂಡು ಬರುತ್ತದೆ.

ರಾಜ್ಯಮಟ್ಟದ ಕನ್ನಡದಿನಪತ್ರಿಕೆಗಳ ಅಂಕಣಗಳಲ್ಲಿ ಬಳಕೆಯಾಗುವ ಅನ್ಯಭಾಷಾ ಪದಗಳನ್ನು ಗಮನಿಸಲಾಗಿ ಅರೆಬ್ಬಿಕ್, ಮರಾಠಿ, ಹಿಂದಿ, ಪಾರಸಿ ಪದಗಳು ಹೆಚ್ಚು, ಕಡಿಮೆ ಸಮಪ್ರಮಾಣದಲ್ಲಿ ಬಳಕೆಯಾದರೆ, ಅಲ್ಲಲ್ಲಿ ಪೋರ್ಚುಗೀಸ್ ಪದಗಳು ಬಳಕೆಯಾಗಿರುವುದು ಕಂಡು ಬರುತ್ತದೆ. ಈ ಎಲ್ಲಾ ಪದಗಳು ಹೆಚ್ಚಾಗಿ ನಾಮಪದಗಳಾಗಿದ್ದು, ಅಲ್ಲೊಂದು, ಇಲ್ಲೊಂದರಂತೆ ಗುಣಪದ ಹಾಗೂ ಕ್ರಿಯಾಪದಗಳು ಬಳಕೆಯಾಗುತ್ತವೆ. ಇಂಗ್ಲೀಷ್ ಪದಗಳ ಬಗ್ಗೆ ಹೇಳುವುದಾದರೆ 'ವಿಜಯ ಕರ್ನಾಟಕ' ದಲ್ಲಿ ಶೇ.೪೫, 'ಸಂಯುಕ್ತ ಕರ್ನಾಟಕ' ಶೇ.೬೫, 'ಕನ್ನಡಪ್ರಭ' ಶೇ.೬೫, 'ಉದಯವಾಣಿ' ಶೇ.೪೦ ಹಾಗೂ 'ಪ್ರಜಾವಾಣಿ' ಯಲ್ಲಿ ಶೇ.೪೦ ರಷ್ಟು ಬಳಕೆಯಾದದ್ದು ಕಂಡುಬರುತ್ತದೆ. ಅಂಕಣಗಳಲ್ಲಿ ಬಳಕೆಯಾಗುವ ಅನ್ಯಭಾಷೆಯ ಪದಗಳು ಮೂಲ, ಅರ್ಥ ಹಾಗೂ ಪ್ರಯೋಗದ ಹಿನ್ನೆಲೆಯಲ್ಲಿ ಹೇಗೆ ಬಳಕೆಯಾಗುತ್ತವೆ ಎಂಬುದನ್ನು ಕೆಲವೊಂದು ಉದಾಹರಣೆಗಳ ಮೂಲಕ ನೋಡಬಹುದು.

**ಆಸಾಮಿ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ವ್ಯಕ್ತಿ, ಮನುಷ್ಯ ಎಂಬ ಅರ್ಥಗಳನ್ನು ಹೊಂದಿದೆ. ಹಿಂದಿ, ಮರಾಠಿಯಲ್ಲಿ ಆಸಾಮೀ ಎಂದು ಕನ್ನಡದಲ್ಲಿ ದೀರ್ಘಾಕ್ಷರವನ್ನು ಕಳೆದುಕೊಂಡು ಹ್ರಸ್ವೀಕರಣದಲ್ಲಿ ಆಸಾಮಿ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಈ ಆಸಾಮಿ ಇದ್ದಾನಲ್ಲ ಒಂದು ಕ್ಷಣವೂ ನಿಂತಲ್ಲಿ ನಿಲ್ಲುವವನಲ್ಲ'. ಇಲ್ಲಿ ಮನುಷ್ಯ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೨)**

**ಆಸ್ಪತ್ರೆ** : (ನಾಮಪದ) ಪೋರ್ಚುಗಿಸ್‌ನಿಂದ ಬಂದ ಪದವಾಗಿದ್ದು ವೈದ್ಯಶಾಲೆ, ಚಿಕಿತ್ಸಾಲಯ, ದವಾಖಾನೆ ಮುಂತಾದ ಅರ್ಥಗಳನ್ನು ಹೊಂದಿದೆ. ಪೋರ್ಚುಗಿಸ್‌ನಲ್ಲಿ ಎಸ್ಪಿಟಲ್, ಎಸ್ಪಿಟೆಲ್, ಎಸ್ಪ್ರಿಟೆಲ್ ಎಂದು, ಇಂಗ್ಲೀಷ್ – ಹಾಸ್ಪಿಟಲ್, ತಮಿಳು – ಆಸ್ಪತ್ತಿರಿ, ತೆಲುಗು – ಆಶಿಪತ್ತಿ, ಹಾಸ್ಪತ್ರಿ, ಹಿಂದಿಯಲ್ಲಿ ಅಸ್ಪತಾಲ್ ಎಂದು, ಕನ್ನಡದಲ್ಲಿ ಆಸ್ಪತ್ರೆ, ಆಸ್ಪತ್ರಿ ಎಂದು ಬಳಕೆಯಾಗಿದೆ.

ಪ್ರಯೋಗ – 'ವೈದ್ಯಕೀಯ ಸವಲತ್ತು ಬೇಡವೆಂದು ಸರ್ಕಾರಿ ಆಸ್ಪತ್ರೆ ಸೇರಿ ಅಲ್ಲಿಯೇ ತೀರಿಕೊಂಡರು'. ಇಲ್ಲಿ ದವಾಖಾನೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೬)**

**ಕಸುಬು** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ೧) ಕೆಲಸ, ಕಾಯಕ, ಉದ್ಯೋಗ ೨) ಸೂಳೆಗಾರಿಕೆ, ವೇಶ್ಯಾವೃತ್ತಿ ಎಂಬ ಅರ್ಥಗಳನ್ನು ಕೊಡುತ್ತದೆ. ಅರೆಬ್ಬಿಯಲ್ಲಿ ಕಸ್ಬ್, ಮರಾಠಿ ಹಾಗೂ ಹಿಂದಿಯಲ್ಲಿ ಕಸಬ ಎಂದು ಕನ್ನಡದಲ್ಲಿ ಕಸುಬು, ಕಸಬ ಎಂದು ಬಳಕೆಯಾಗಿದೆ.

ಪ್ರಯೋಗ – 'ರಾಜಕಾರಣ ಎಂಬುದು ಒಂದು ವೃತ್ತಿ, ಧಂದೆ, ಕಸುಬು, ಚಟ, ಜನಸೇವೆ ಎಂಬುದೆಲ್ಲ ಸೋಗು'. ಇಲ್ಲಿ ಕಸುಬು ಎಂಬುದು ವೃತ್ತಿ, ಕೆಲಸ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೫)**

**ಕಾಗದ** : (ನಾಮಪದ) ಪಾರಸಿ ಮೂಲದಿಂದ ಬಂದಿದೆ. ೧) ಬಿದಿರು ಮೊದಲಾದವುಗಳಿಂದ ಮಾಡಿದ ಬರೆಯಲು ಉಪಯೋಗಿಸುವ ಹಾಳೆ ೨) ಒಪ್ಪಂದ, ಕರಾರು ಪತ್ರ ಮುಂತಾದ ಅರ್ಥಗಳನ್ನು ಕೊಡುತ್ತದೆ. ಪಾರಸಿ, ಹಿಂದಿ, ಮರಾಠಿಯಲ್ಲಿ ಕಾಗದ್ ಎಂದು, ಅರೆಬ್ಬಿಕ್‌ನಲ್ಲಿ ಕಾಘಜ್ ಎಂದು, ಕನ್ನಡದಲ್ಲಿ ಕಾಗದ, ಕಾಗ್ದ, ಕಾದಗ ಎಂದು ಬಳಕೆಯಾಗುತ್ತದೆ.

ಪ್ರಯೋಗ – 'ಪ್ಲಾಸ್ಟಿಕ್ ಚೀಲಗಳಿಗೆ ಪರ್ಯಾಯವಾಗಿ ಕಾಗದಬಟ್ಟೆ ಇನ್ನಿತರ ಪರಿಸರ ಸ್ನೇಹಿ ಚೀಲಗಳಿಗೆ ಪ್ರೋತ್ಸಾಹಿಸಬೇಕಿದೆ'. ಇಲ್ಲಿ ಕಾಗದ ಎಂಬ ಪದವು ಹಾಳೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಕನ್ನಡಪ್ರಭ, ಜೂ.೭)**

**ಕಾಮೆಂಟ್ಸ್:** ಗುಣಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಆಕ್ಷೇಪ, ಅಭಿಪ್ರಾಯ ಮುಂತಾದ ಅರ್ಥಗಳನ್ನು ಕೊಡುತ್ತದೆ. ಇಂಗ್ಲೀಷಿನಲ್ಲಿ 'Coments' ಎಂದು ಬಳಕೆಯಲ್ಲಿದೆ.

ಪ್ರಯೋಗ – 'ರಾಜಕಾರಣ ಎಂದರೆ ನೋ ಕಾಮೆಂಟ್ಸ್ ಮುಂದೆ ಮಾತನಾಡಿ ಪ್ರಯೋಜನವಿಲ್ಲ'. ಇಲ್ಲಿ ಆಕ್ಷೇಪ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೫)**

**ಕಾಯ್ದೆ :** (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು, ೧) ನಿಯಮ, ಕಟ್ಟಳೆ, ಶಾಸನ, ಕಾನೂನು ೨) ನ್ಯಾಯಶಾಸ್ತ್ರ ಎಂಬ ಅರ್ಥಗಳನ್ನು ಕೊಡುತ್ತದೆ. ಅರೆಬ್ಬಿ – ಕಾಇದಾ ಹಿಂದಿ, ಮರಾಠಿಯಲ್ಲಿ ಕಾಯದಾ ಎಂದು, ಕನ್ನಡದಲ್ಲಿ ಕಾಯದೆ, ಕಾಯಿದೆ, ಕಾಯ್ದೆ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ರಾಜಕೀಯವಾಗಿ ಕಾಯ್ದೆಯನ್ನು ಪ್ರಶ್ನಿಸದೇ ರಾಜ್ಯಪಾಲರ ಮೇಲೆ ಗೂಬೆ ಕೂಡಿಸುತ್ತಾರೆ'. **(ಸಂ. ಕರ್ನಾಟಕ, ಜೂ.೪)**

**ಕಾಲೇಜು :** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಉಚ್ಚ ವಿದ್ಯಾಸಂಸ್ಥೆ ಎಂಬ ಅರ್ಥವನ್ನು ಕೊಡುತ್ತದೆ.

ಪ್ರಯೋಗ – 'ಕಾಲೇಜು ಪ್ರಾಧ್ಯಾಪಕ ದಿನಗಳಲ್ಲಿ ಅಂದು ಕೇಳಿದಾಗ ನಾನೆಂದದ್ದು ನೆನಪಿದೆ' **(ಸಂ.ಕರ್ನಾಟಕ, ಜೂ.೧)**

**ಕೇರ್ :** (ಕ್ರಿಯಾಪದ) ಇದು ಇಂಗ್ಲೀಷಿನಿಂದ ಬಂದಿದ್ದು. ಗಮನಿಸು, ಲಕ್ಷ್ಯವಹಿಸು, ಜಾಗೃತವಾಗಿರು, ಎಚ್ಚರಿಕೆ ಎಂಬ ಅರ್ಥಗಳನ್ನು ಕೊಡುತ್ತದೆ. ಇಂಗ್ಲೀಷಿನಲ್ಲಿ 'Care' ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಮಕ್ಕಳ ಬಗ್ಗೆ ಕೇರ್ ತೆಗೆದುಕೊಳ್ಳಲು ತಂದೆ, ತಾಯಿಗೆ ಜಂಜಾಟದ ಸಂಸಾರದಲ್ಲಿ ಪುರಸೊತ್ತಿಲ್ಲ'. ಇಲ್ಲಿ ಕೇರ್ ಎಂಬ ಪದವು ಗಮನ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (ಕ.ಪ್ರಭ, ಜೂ.೨)

**ಖಜಾನೆ :** (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ೧)ಬೊಕ್ಕಸ, ಭಂಡಾರ, ತಿಜೋರಿ, ಕೋಶಗಾರ ಎಂಬ ಅರ್ಥಗಳನ್ನು ಕೊಡುತ್ತದೆ. ಪಾರಸಿ ಖಜಾನಹ್, ಅರೆಬ್ಬಿಕ್ ಖಜಾನಾ, ಖಜೀನಾ, ಹಿಂದಿ, ಮರಾಠಿ – ಖಜಾನಾ, ಖಜೀನಾ ಎಂದು, ಕನ್ನಡದಲ್ಲಿ ಖಜಾನೆ, ಖಜಾನಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಇಲಾಖೆಯ ವರದಿಗಳು ತಪ್ಪು ಮಾಹಿತಿ ಒದಗಿಸುವ ಖಜಾನೆಗಳಾಗಿ ಮಾರ್ಪಾಡು ಹೊಂದಿವೆ'. ಇಲ್ಲಿ ಖಜಾನೆ ಎಂಬ ಪದವು ಕೋಶಗಾರ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಉ.ವಾಣಿ, ಜೂ.೫)**

**ಖರ್ಚು** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ವೆಚ್ಚ ಮಾಡು, ವ್ಯಯ ಮಾಡು, ಸವೆಸು ಎಂಬ ಅರ್ಥವನ್ನು ಕೊಡುತ್ತದೆ. ಮರಾಠಿ – ಖರ್ಚ ಎಂದು ಕನ್ನಡದಲ್ಲಿ ಖರ್ಚು ಎಂದು ಬಳಕೆಯಾಗಿದೆ.

ಪ್ರಯೋಗ – 'ಹೀಗೆ ಸಂಗ್ರಹವಾದ ಹಣವನ್ನು ಆಶ್ರಮ ನಿವಾಸಿಗಳು ದೈನಂದಿನ ಖರ್ಚಿಗಾಗಿ ಉಪಯೋಗಿಸುತ್ತಿದ್ದರು'. ಇಲ್ಲಿ ಖರ್ಚು ಎಂಬುದು ವ್ಯಯ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೬)**

**ಖಾಲಿ** : (ಗುಣಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ೧) ಬರಿದಾದದ್ದು, ತೆರವಾದದ್ದು ೨) ಕೆಲಸಕ್ಕೆ ಬಾರದ, ನಿರರ್ಥಕವಾದ, ಹುರುಳಿಲ್ಲದ ಎಂಬ ಅರ್ಥಗಳನ್ನು ಕೊಡುತ್ತದೆ. ಅರೆಬ್ಬಿ, ಪಾರಸಿ, ಹಿಂದಿ, ಮರಾಠಿಯಲ್ಲಿ ಖಾಲೀ ಎಂದು ಕನ್ನಡದಲ್ಲಿ ದೀರ್ಘಸ್ವರವನ್ನು ಕಳೆದುಕೊಂಡು ಖಾಲಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಖಾಲಿ ಬಿದ್ದಿರುವ ಐದು ಸ್ಥಾನಗಳಿಗೆ ನಾಮಕಾರಣ ಮಾಡುವ ಪ್ರಕ್ರಿಯೆಯನ್ನು ಸರ್ಕಾರ ಮುಗಿಸಬೇಕಾಗಿದೆ'. **(ಸಂ.ಕರ್ನಾಟಕ, ಜು.೫)**

**ಗಲಾಟೆ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ೧) ಗದ್ದಲ, ಗಲಭೆ ೨) ಗಡಿಬಿಡಿ, ಸಂಭ್ರಮ ೩) ಹಾವಳಿ, ತೊಂದರೆ, ತಂಟೆ ೪) ಜನಜಂಗುಳಿ, ನೂಕುನುಗ್ಗಲು, ಸಂದಣಿ ಎಂಬ ಅರ್ಥಗಳನ್ನು ಹೊಂದಿದೆ. ಮರಾಠಿ – ಗಳಾಟಾ, ಗಳ್ಳಾಟಾ, ತಮಿಳು – ಗಲಾಟ್ಟ, ಕನ್ನಡದಲ್ಲಿ ಗಲಾಟೆ, ಗಲಾಟಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಮಗ ಶಾಲೆನಲ್ಲಿ ಯಾವಾಗಲೂ ಬೇರೆ ಮಕ್ಕಳ ಜೊತೆ ಜಗಳ, ಗಲಾಟೆ ಮಾಡ್ತಾನೆ'. ಇಲ್ಲಿ ಗದ್ದಲ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೩)**

**ಗಲ್ಲಿ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ೧) ಎರಡು ಕಡೆ ಮನೆಗಳುಳ್ಳ ಇಕ್ಕಟ್ಟಾದ ಬೀದಿ, ಓಣಿ, ವಠಾರ ಎಂಬ ಅರ್ಥಗಳನ್ನು ಕೊಡುತ್ತದೆ. ಹಿಂದಿ – ಗಲೀ, ಮರಾಠಿ – ಗಲ್ಲೀ, ಕನ್ನಡದಲ್ಲಿ ದೀರ್ಘಸ್ವರವನ್ನು ಕಳೆದುಕೊಂದು ಗಲ್ಲಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಒಂದರ್ಥದಲ್ಲಿ ಗಲ್ಲಿ–ಗಲ್ಲಿ ತಿರುಗಾಡುವ ನಾಯಿಯಂತೆ'. **(ಸಂ.ಕರ್ನಾಟಕ, ಜೂ.೩)**

**ಗಿರಕೀ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ೧) ತಲೆಕೆಳಗಾಗಿ ಬೀಳುವಿಕೆ, ಲಾಗ, ದಿಂಡುರುಳು ೨) ಚಕ್ರಕಾರವಾಗಿ ಸುತ್ತುವಿಕೆ ಎಂಬ ಅರ್ಥಗಳನ್ನು ಕೊಡುತ್ತದೆ. ಮರಾಠಿಯಲ್ಲಿ ಗಿರಕಾ ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ 'ಆ' ದೀರ್ಘಸ್ವರವನ್ನು ಕಳೆದುಕೊಂಡು 'ಇ' ಕಾರದೊಂದಿಗೆ ಗಿರಿಕಿ, ಗಿರಿಕೀ ಎಂದು ಬಳಕೆಯಲ್ಲಿದೆ.
ಪ್ರಯೋಗ – 'ರೈತನು ಗೊಬ್ಬರ – ಬೀಜಗಳಾಗಿ ಅಂಗಡಿಗಳ ಸುತ್ತ ಗಿರಿಕೀ ಹೊಡೆಯಬೇಕಾಗಿದೆ'. **(ಸಂ.ಕರ್ನಾಟಕ, ಜೂ. ೭)**

**ಗೆಟ್‌ಅಪ್** : (ನಾಮಪದ) ಇಂಗ್ಲೀಷಿನಿಂದ ಬಂದಿದ್ದು. ಸರಿಯಾಗಿ ತಿದ್ದು, ಸರಿಯಾಗಿ ಕಾಣು ಎಂಬ ಅರ್ಥಗಳನ್ನು ಕೊಡುತ್ತದೆ. ಇಂಗ್ಲೀಷಿನಲ್ಲಿ 'Getup' ಎಂದು ಬಳಕೆಯಲ್ಲಿದೆ.
ಪ್ರಯೋಗ – 'ಹಾಗೆಯೇ ಶೈಕ್ಷಣಿಕ ವಲಯಕ್ಕೂ ಅದೇ ಗೆಟ್‌ಅಪ್'. **(ಕ.ಪ್ರಭ, ಜೂ.೨)**

**ಚಂದಾ** : (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ವಂತಿಗೆ, ದೇಣಿಗೆ, ವರ್ಗಣಿ ಎಂಬ ಅರ್ಥಗಳನ್ನು ಕೊಡುತ್ತದೆ. ಪಾರಸಿ, ಹಿಂದಿ, ಮರಾಠಿಯಲ್ಲಿ ಚಂದಾ ಎಂದು ಬಳಕೆಯಾದರೆ, ಕನ್ನಡದಲ್ಲಿ ಯಥಾವತ್ತಾಗಿ ಚಂದಾ ಎಂದು ಬಳಕೆಯಾಗಿದೆ.
ಪ್ರಯೋಗ – 'ಕಾಂಗ್ರೆಸ್‌ನ ಸದಸ್ಯರಿಂದ ಚಂದಾ ವಸೂಲಿ ಮಾಡಬೇಕಾದ ಪ್ರಸಂಗ ಬಂದಿತು'. ಇಲ್ಲಿ ಚಂದಾ ಎಂಬ ಪದವು ದೇಣಿಗೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೬)**

**ಚಟ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ಗೀಳು, ತೆವಲು, ತೀಬ್ರಾಸಕ್ತಿ, ಹವ್ಯಾಸ ಮುಂತಾದ ಅರ್ಥಗಳನ್ನು ಕೊಡುತ್ತದೆ. ಹಿಂದಿಯಲ್ಲಿ ಚಟ = ಕಳಂಕದೋಷ, ಐಬು ಎಂದು, ಕನ್ನಡದಲ್ಲಿ ಚಟ ಎಂದು ಬಳಕೆಯಾಗಿದೆ.
ಪ್ರಯೋಗ – 'ರಾಜಕಾರಣ ಎಂಬುದೊಂದು ಚಟ'. ಇಲ್ಲಿ ಚಟ ಎಂಬ ಪದ ತೆವಲು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೫)**

**ಚಪಾತಿ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ಲಟ್ಟಣಿಗೆಯಿಂದ ಲಟ್ಟಿಸಿ ಮಾಡಿದ ಗೋದಿಯರೊಟ್ಟಿ, ಬಿಳಿಹೋಳಿಗೆ (ಉ.ಕ.) ಎಂಬ ಅರ್ಥಗಳನ್ನು ಹೊಂದಿದೆ. ಹಿಂದಿ, ಮರಾಠಿ – ಚಪಾತೀ, ಪಾರಸಿ – ಛಪಾತಿಅ, ಕನ್ನಡದಲ್ಲಿ ಚಪತಿ, ಚಪಾತಿ ಎಂದು ಬಳಕೆಯಾಗಿದೆ.
ಪ್ರಯೋಗ – 'ಮಕ್ಕಳು ಊಟಕ್ಕೆ ನೀಡುತ್ತಿದ್ದ ಹಾಲು, ತುಪ್ಪ ಮತ್ತು

ಗೋದಿ ಚಪಾತಿಯನ್ನು ತಿನ್ನಲಿಲ್ಲ'. ಇಲ್ಲಿ ಗೋಧಿ ಹಿಟ್ಟಿನಿಂದ ತಯಾರಿಸಿದ ರೊಟ್ಟಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೬)**

**ಚಾಲಾಕಿತನ :** (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ಚುರುಕು, ಚಾತುರ್ಯ, ಚಾಕಚಕ್ಯತೆ ಎಂಬ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಪಾರಸಿ – ಚಾಲಾಕ್, ಮರಾಠಿ – ಚಲಾಕ್, ಚಲಾಖ್, ಕನ್ನಡದಲ್ಲಿ ಚಾಲಾಕು, ಚಾಲಾಕಿ, ಚಾಲೋಕು ಎಂದು ಬಳಕೆಯಾಗುತ್ತದೆ.

ಪ್ರಯೋಗ – 'ಅವರ ಮಾತು, ವಿಚಾರ, ವಿನಯಶೀಲತೆ, ಚಾಲಾಕಿತನ ಎಂತಹವರನ್ನು ಮಂತ್ರಮುಗ್ಧಗೊಳಿಸುತ್ತದೆ'. ಇಲ್ಲಿ ಚಾತುರ್ಯ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೫)**

**ಚೇಲಾ :** (ನಾಮಪದ) ಹಿಂದಿ ಮೂಲದಿಂದ ಬಂದಿದೆ. ೧) ಶಿಷ್ಯ, ವಿದ್ಯಾರ್ಥಿ ೨) ಅನುಯಾಯಿ, ಸೇವಕ, ತೈನಾತಿ ೩) ಬಲಾತ್ಕಾರವಾಗಿ ಎಳೆವಯಸ್ಸಿನಲ್ಲಿ ಮುಸಲ್ಮಾನನಾಗಿ ಮಾಡಲ್ಪಟ್ಟವನು, ಇಂತಹ ಬಾಲಕರನ್ನು ದೊಡ್ಡವರಾದ ಮೇಲೆ ಚೇಲಾ ಎಂಬ ಹೆಸರಿನೊಂದಿಗೆ ಸೈನ್ಯಕ್ಕೆ ಸೇರಿಸಿಕೊಳ್ಳಲಾಗುತ್ತಿತ್ತು. ಹಿಂದಿ, ಮರಾಠಿಯಲ್ಲಿ ಚೇಲಾ, ಪಾರಸಿ – ಚಿಲ್ಲ, ಕನ್ನಡದಲ್ಲಿ ಚೇಲ, ಚೇಲಾ, ಚೇಲಿ ಚೇಲೆ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಒಮ್ಮೆ ರಾಜಕಾರಣಿಯೊಬ್ಬ ನಾಯಕನೆಂದು ಅನಿಸಿಕೊಂಡು ಬಿಟ್ಟರೆ ಅವನ ಸುತ್ತಲೂ ಕಾರ್ಯಕರ್ತರು, ಚೇಲಾಗಳು ಸುತ್ತಲಾರಂಭಿಸುವರು'. ಇಲ್ಲಿ ಚೇಲಾ ಎಂಬ ಪದವು ಸೇವಕ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೫)**

**ಜವಾಬು :** (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ೧) ಉತ್ತರ, ಮರುನುಡಿ, ಎದುರುನುಡಿ ೨) ಮೊಕದ್ದಮೆಯ ವಿಚಾರಣೆಯಲ್ಲಿ ಅರೋಪಿ ಅಥವಾ ಸಾಕ್ಷಿದಾರರು ನೀಡುವ ಹೇಳಿಕೆ ೩) ಹೊಣೆ, ಜವಾಬ್ದಾರಿ ೪) ಪತ್ರ, ಕಾಗದ ಮುಂತಾದ ಅರ್ಥಗಳನ್ನು ಕೊಡುತ್ತದೆ. ಅರೆಬ್ಬಿ, ಪಾರಸಿ, ಹಿಂದಿ ಹಾಗೂ ಮರಾಠಿಯಲ್ಲಿ ಜಬಾಬ್ ಎಂದು, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ ಜವಾಬು, ಜವಾಬೂ ಎಂದು ಬಳಕೆಯಾಗಿದೆ.

ಪ್ರಯೋಗೆ – 'ಮಂತ್ರಿಯ ಮಗನ ಜವಾಬು ಯಾರಿಗೂ ಏನು ಹೇಳಬೇಕೆಂದು ತಿಳಿಯಲಿಲ್ಲ'. ಇಲ್ಲಿ ಎದುರುನುಡಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಉದಯವಾಣಿ, ಜೂ.೬)**

**ಜಾಡಿ** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ತುಪ್ಪ, ಉಪ್ಪಿನಕಾಯಿ ಮುಂತಾದವುಗಳನ್ನು ಹಾಕಿ ಇಡುವ ಪಿಂಗಾಣಿ ಪಾತ್ರೆ, ಗಾಜಿನ ಅಥವಾ ಮಣ್ಣಿನ ಪಾತ್ರೆ ಎಂಬ ಅರ್ಥಗಳನ್ನು ಕೊಡುತ್ತದೆ. ಅರೆಬ್ಬಿಕ್‌ನಲ್ಲಿ ಜಾರಹ್, ತಮಿಳು – ಚಾಟಿ. ಮಲಯಾಳಂ – ಚಾಡಿ, ತುಳು – ಜಾಡಿ, ಕನ್ನಡದಲ್ಲಿ ಜಾಡಿ ಎಂದು ಬಳಕೆಯಾಗುತ್ತದೆ.
ಪ್ರಯೋಗ – 'ಜೇಡರಹುಳು ಜಾಡಿ ಹತ್ತಿರ ಬಲೆ ಎಣೆಯುತ್ತದೆ'. ಇಲ್ಲಿ ಜಾಡಿ ಎಂದರೆ ಮಣ್ಣಿನ ಪಾತ್ರೆ ಎಂಬ ಅರ್ಥದಲ್ಲಿ ಬಳಕೆಯಾಗಿದೆ. **(ವಿ.ಕರ್ನಾಟಕ, ಜೂ.೨)**

**ಜಾಸ್ತಿ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ಅಧಿಕ, ಹೆಚ್ಚು, ಹೇರಳ ಎಂಬ ಅರ್ಥಗಳನ್ನು ಕೊಡುತ್ತದೆ. ಹಿಂದಿಯಲ್ಲಿ ಜಾಸ್ತೀ, ಮರಾಠಿಯಲ್ಲಿ ಜಾಸ್ತಿ ಎಂದು ಕನ್ನಡದಲ್ಲಿ ಯಥಾವತ್ತಾಗಿ ಜಾಸ್ತಿ ಎಂದು ಬಳಕೆಯಲ್ಲಿದೆ.
ಪ್ರಯೋಗ – 'ಕೆಮ್ಮಣ್ಣಿನ ಕೋರ್ಟ್ ಆದ್ದರಿಂದ ಜಾರುವುದು ಜಾಸ್ತಿ'. ಇಲ್ಲಿ ಜಾಸ್ತಿ ಎಂಬ ಹೆಚ್ಚು ಎಂಬ ಅರ್ಥದಲ್ಲಿ ಬಳಕೆಯಾಗಿದೆ. **(ವಿ.ಕ., ಜೂ.೭)**

**ಟಾರ್ಗೆಟ್** : (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಮೇರೆ, ಮಿತಿ, ಎಲ್ಲೆ ಎಂಬ ಅರ್ಥಗಳನ್ನು ಕೊಡುತ್ತದೆ. ಈ ಪದವು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾಹರಣೆ : ಎಲ್.ಐ.ಸಿ. ಏಜೆಂಟರು ಈ ಪದವನ್ನು ಮಿತಿ ಎಂಬ ಅರ್ಥದಲ್ಲಿ ಬಳಸಿದರೆ, ಕ್ರಿಕೆಟ್ ಆಟದ ಸಂದರ್ಭದಲ್ಲಿ ಗುರಿ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಇಂಗ್ಲೀಷಿನಲ್ಲಿ 'Target' ಎಂದು ಬಳಕೆಯಲ್ಲಿದೆ.
ಪ್ರಯೋಗ – 'ಅವರೊಬ್ಬರನ್ನೇ ಟಾರ್ಗೆಟ್ ಇಟ್ಟುಕೊಂಡು ಈ ಮಾತನ್ನು ಹೇಳುತ್ತಿಲ್ಲ'. ಇಲ್ಲಿ ಗುರಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೫)**

**ಡಾಕ್ಟರ್** : (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದೆ. ವೈದ್ಯ, ಶರೀರ ತಪಾಸಕ ಮುಂತಾದ ಅರ್ಥಗಳನ್ನು ಹೊಂದಿದೆ. ಇಲ್ಲಿ ಇಂಗ್ಲೀಷಿನಲ್ಲಿ 'Doctor' ಎಂದು ಬಳಕೆಯಾಗಿದೆ.
ಪ್ರಯೋಗ – 'ಅವನೊಬ್ಬ ಡಾಕ್ಟರ್ ಆಗಬೇಕೆಂದು ಆಸೆ ಪಟ್ಟಿದ್ದು ನಿಜ'. ಇಲ್ಲಿ ವೈದ್ಯ ಎಂಬ ಅರ್ಥದಲ್ಲಿ ಈ ಪದ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೩)**

**ಢೋಂಗಿ :** (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ಸುಳ್ಳು, ವಂಚನೆ, ಮೋಸ ಎಂಬ ಅರ್ಥಗಳನ್ನು ಕೊಡುತ್ತದೆ. ಹಿಂದಿ, ಮರಾಠಿಯಲ್ಲಿ ಢೋಂಗಿ, ಢೋಂಗ್ – ಕಪಟಿ, ಮೋಸಗಾರ, ಕನ್ನಡದಲ್ಲಿ ಡೊಂಗಿ, ಢೋಂಗಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಢೋಂಗಿ ಜಾತ್ಯತೀತತೆ, ಢೋಂಗಿ ಧರ್ಮ, ಇವು ಬೇಡ'. **(ಸಂ.ಕರ್ನಾಟಕ, ಜೂ.೨)**

**ತಾಲೂಕು :** (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. (ಅಮಲ್ದಾರರ ಅಥವಾ ತಹಶೀಲ್ದಾರರ ಆಡಳಿತಕ್ಕೆ ಒಳಪಟ್ಟಿರುವ) ಜಿಲ್ಲೆಯ ಒಂದು ಭಾಗ, ತಹಸೀಲು ಎಂಬ ಅರ್ಥ ಕೊಡುತ್ತದೆ. ಅರೆಬ್ಬಿಕ್ – ತಅಲ್ಲುಕಹ್, ಹಿಂದಿಯಲ್ಲಿ ತಾಲ್ಲೂಕಾ, ತಅಲ್ಲುಕಾ ಎಂದು, ಮರಾಠಿಯಲ್ಲಿ ತಾಲೂಕಾ, ತಾಲೂಖಾ ಎಂದು, ಕನ್ನಡದಲ್ಲಿ ತಾಲೂಕು, ತಾಲ್ಲೂಕು, ತಾಲುಕು ಎಂದು ಬಳಕೆಯಾಗಿದೆ.

ಪ್ರಯೋಗ – 'ತಾಲೂಕಿನಾದ್ಯಂತ ಆರ್ಭಟ'. **(ಉ.ವಾಣಿ, ಜೂ.೨)**

**ದಂಗು :** (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ೧) ಬೆರಗು ಸೋಜಿಗ ೨) ಹೆದರಿಕೆ, ಗಾಬರಿ ೩) ಪರವಶತೆ ಎಂಬ ಅರ್ಥವನ್ನು ಕೊಡುತ್ತದೆ. ಪಾರಸಿ, ಹಿಂದಿ, ಮರಾಠಿಯಲ್ಲಿ ದಂಗ್ ಎಂದು ಬಳಕೆಯಲ್ಲಿದ್ದು, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯವಾಗಿ ಬಳಕೆಯಾಗಿದೆ. ಪ್ರಯೋಗ – 'ತೀಕ್ಷ್ಣ ವಿಷ ಉಣಿಸಿ ಅವುಗಳನ್ನು ದಂಗಾಗಿಸಿ ಸುತ್ತಲೂ ಬಲೆ ಹೆಣೆದು ಹೆಡಮುರಿ ಕಟ್ಟುತ್ತವೆ'. ಇಲ್ಲಿ ಗಾಬರಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೨)**

**ದಾಖಲೆ :** (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ೧) ಲೆಕ್ಕಕ್ಕೆ ಸೇರಿದ್ದು, ಲೆಕ್ಕಕ್ಕೆ ಸಂದಾಯವಾದದ್ದು ೨) ಆಧಾರಪೂರ್ವಕವಾದ, ಪ್ರಮಾಣಬದ್ಧವಾದ ಕಾಗದಪತ್ರಗಳಲ್ಲಿ ಸೇರಿಸಿದ ಒಕ್ಕಣಿಕೆ – ನಮೂದು ೨) ಲಿಖಿತ ರುಜುವಾತು, ಪ್ರಮಾಣಬದ್ಧವಾದ ಕಾಗದಪತ್ರ ಎಂಬ ಅರ್ಥಗಳಲ್ಲಿ ಬಳಕೆಯಾಗಿದೆ. ಪಾರಸಿ, ಹಿಂದಿ ದಾಖಿಲ್, ದಾಖಲಾ ಎಂದು ಬಳಕೆಯಾಗಿದೆ. ಕನ್ನಡದಲ್ಲಿ ದಾಖಲೆ, ದಾಖಲು ಎಂದು ಬಳಕೆಯಾಗಿದೆ.

ಪ್ರಯೋಗ – 'ವಿವರ ಒದಗಿಸುವ ದಾಖಲೆಯೇ ಯೋಜನೆ'. **(ಉ.ವಾಣಿ, ಜೂ.೨)**

**ದಾಯಾದಿ:** (ಗುಣಪದ) ಪಾರಸಿ ಮೂಲದಿಂದ ಬಂದಿದ್ದು. ವೈರಿ, ಶತ್ರು, ಕೆಟ್ಟದ್ದನ್ನು ಬಯಸುವವರು, ನಮ್ಮ ಹಿಡಿತವನ್ನು ಬಯಸದವರು ಎಂಬ ಅರ್ಥಗಳನ್ನು

ಕೊಡುತ್ತದೆ. ಪಾರಸಿ – ದಯಾದ್, ದಾಯಾದ್, ಹಿಂದಿ – ದಯಾದ್ ಎಂದು, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಇ' ಕಾರಂತ್ಯವಾಗಿ ದಾಯಾದಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಜೇಡಗಳಿಗೆ ಎರಡು ಬಗೆಯ ದಾಯಾದಿ ನೆಂಟರಿದ್ದಾರೆ'. ಇಲ್ಲಿ ಕೆಟ್ಟದ್ದನ್ನು ಬಯಸುವವರು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೨)**

**ಧಾಟಿ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು ೧) ಕ್ರಮ, ರೀತಿ, ಶೈಲಿ, ಧೋರಣೆ ೨) ಸಂಗೀತದಲ್ಲಿನ ಸ್ವರಗತಿ, ಏರಿಳಿತ, ಲಯ, ಹಾಡಿನ ರೀತಿ, ಚಾಲು, ಕ್ರಮ ೩) ಒಂದು ಶಾಸ್ತ್ರದ ರೂಢಿ – ಸಂಪ್ರದಾಯ ಎಂಬ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಮರಾಠಿಯಲ್ಲಿ ಧಾಟಿ ಎಂದು, ಕನ್ನಡದಲ್ಲಿ ಯಥಾವತ್ತಾಗಿ ಧಾಟಿ, ದಾಟಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಪಲ್ಲವಿಯನ್ನು ಹಿಂದಿ ಧಾಟಿಯಲ್ಲಿ ಹಾಡುತ್ತಾ ಮಂತ್ರಿಗಳು ಪ್ರಮಾಣ ವಚನ ಸ್ವೀಕರಿಸಿದರು'. ಇಲ್ಲಿ ಹಾಡಿನ ರೀತಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೪)**

**ಪ್ರಾಮೀಸ್**: (ಗುಣಪದ) ಇಂಗ್ಲೀಷ್‌ನಿಂದ ಬಂದಿದ್ದು. ವಚನ, ಭಾಷೆ, ಪ್ರತಿಜ್ಞೆ, ಕೊಟ್ಟ ಮಾತಿಗೆ ತಪ್ಪದಂತೆ ನಡೆದುಕೊಳ್ಳುವುದು' ಎಂಬ ಅರ್ಥಗಳನ್ನು ಕೊಡುತ್ತದೆ.

ಪ್ರಯೋಗ – 'ಕಂಡಲ್ಲಿ ಮಲಗುವುದು ಆಗದ್ದನ್ನು ಪ್ರಾಮೀಸ್ ಮಾಡುವುದು ಇವು ಬೇಡ' **(ಸಂ.ಕರ್ನಾಟಕ, ಜೂ.೨)**

ಟ್ವೆಂಟಿ–ಟ್ವೆಂಟಿ, ಬಿಗಿನ್ನಿಂಗ್, ಲಾಆಂಡ್ ಆರ್ಡರ್, ಮೈನಾರಿಟಿ, ಟೆಸ್ಟ್‌ಮ್ಯಾಚ್, ಬೌಲಿಂಗ್, ಬ್ಯಾಟ್ಸ್‌ಮನ್, ವಿಕೇಟ್ ಈ ಎಲ್ಲಾ ಇಂಗ್ಲೀಷ್ ಪದಗಳು ಸಂಯುಕ್ತ ಕರ್ನಾಟಕ ಪತ್ರಿಕೆಯ ಅಂಕಣಗಳಲ್ಲಿ ಬಳಕೆಯಾದ ಇಂಗ್ಲೀಷ್ ಪದಗಳಾಗಿವೆ.

**ಬ್ಯಾಟರಿ** : (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ೧) ಒಣ ವಿದ್ಯುತ್ ಕೋಶಗಳಿಂದ ಬೆಳಗಿಸಬಲ್ಲ ಸಣ್ಣಬಲ್ಬಿನ ದೀಪ, ೨) ಒಣ ವಿದ್ಯುತ್ ಕೋಶಗಳ ಶ್ರೇಣಿ ಎಂಬ ಅರ್ಥಗಳನ್ನು ಕೊಡುತ್ತದೆ. ಇಂಗ್ಲೀಷಿನಲ್ಲಿ 'Bat tery' ಎಂದು ಬಳಕೆಯಾಗಿದೆ.

ಪ್ರಯೋಗ – 'ನಾಳೆ ಬಿಸಿಲಲ್ಲಿ ಬ್ಯಾಟರಿ ರೀಚಾರ್ಜ್ ಆಗಬೇಕು'. ಇಲ್ಲಿ ಒಣ ವಿದ್ಯುತ್ ಕೋಶಗಳ ಶ್ರೇಣಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೫)**

ಮಜೂರಿ : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ೧) ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಕೊಡುವ ಹಣ, ಕೂಲಿ ಎಂಬ ಅರ್ಥಗಳನ್ನು ಹೊಂದಿದೆ. ಹಿಂದಿ, ಮರಾಠಿಯಲ್ಲಿ ಮಜೂರೀ ಎಂದು ಬಳಕೆಯಾದರೆ, ಕನ್ನಡದಲ್ಲಿ ಅದು ದೀರ್ಘಸ್ವರವನ್ನು ಕಳೆದುಕೊಂಡು ಮಜೂರಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಪ್ರತಿಯೊಬ್ಬರು ಶ್ರಮದಾನವನ್ನು ನಿಗದಿಪಡಿಸಿದ ಮಜೂರಿಯ ಲೆಕ್ಕವನ್ನು ಹಾಕುತ್ತಾರೆ'. ಇಲ್ಲಿ ಕೂಲಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಉ.ವಾಣಿ, ಜೂ.೭)**

ಮಾಜಿ : (ಗುಣಪದ) ಅರೆಬ್ಬಿ ಮೂಲದಿಂದ ಬಂದಿದ್ದು. ಹಳೆಯ, ಹಿಂದಿನ, ಅಧಿಕಾರದಿಂದ ನಿವೃತ್ತರಾದ ಎಂಬ ಅರ್ಥಗಳನ್ನು ಕೊಡುತ್ತದೆ. ಅರೆಬ್ಬಿ, ಹಿಂದಿ, ಮರಾಠಿಯಲ್ಲಿ ಮಾಜೀ ಎಂದು, ಕನ್ನಡದಲ್ಲಿ ದೀರ್ಘಾಕ್ಷರವನ್ನು ಕಳೆದುಕೊಂಡು ಮಾಜಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಮಾಜಿ ಆಗಿರುವ ದೊರೆ ಜ್ಞಾನೇಂದ್ರಶಾಹಾ ಹಾಗೂ ಅವರ ಕುಟುಂಬ ಇನ್ನು ಮುಂದೆ ಸಾಮಾನ್ಯ ಪ್ರಜೆಗಳಾಗಿ ಬದುಕಬೇಕಾಗಿದೆ'. ಇಲ್ಲಿ ಅಧಿಕಾರ ಕಳೆದುಕೊಂಡ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೬)**

ಮಾಮೂಲು: (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ೧) ರೂಢಿ, ಅಭ್ಯಾಸ ೨) ಪರಿಪಾಠ, ಸಂಪ್ರದಾಯ ೩) ದಿನನಿತ್ಯದ್ದು, ದಿನಗಟ್ಟಳೆ ವ್ಯವಹಾರ ಎಂಬ ಅರ್ಥಗಳನ್ನು ಕೊಡುತ್ತದೆ. ಅರೆಬ್ಬಿ – ಮಅಮೂಲ್, ಹಿಂದಿ, ಮರಾಠಿ – ಮಾಮೂಲ್ ಎಂದು, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ ಮಾಮುಲು ಎಂದು ಬಳಕೆಯಾಗಿದೆ.

ಪ್ರಯೋಗ – 'ಆರ್ಥಿಕವಾಗಿ ಜನರ ಸಹಭಾಗಿತ್ವ ತೆಗೆದುಕೊಂಡು ಉಳಿದಿದ್ದನ್ನು ಮಾಮೂಲು ಸರ್ಕಾರಿ ರೀತಿಯಲ್ಲಿ ಮಾಡುವುದು ಸರಿಯಾಗುವುದಿಲ್ಲ'. ಇಲ್ಲಿ ಮಾಮುಲು ಎಂಬ ಪದವು ದಿನನಿತ್ಯದ್ದು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಉ.ವಾಣಿ, ಜೂ.೭)**

ರವಾನಿಸು : (ಕ್ರಿಯಾಪದ) ಮರಾಠಿ ಮೂಲದಿಂದ ಬಂದಿದ್ದು. ಪತ್ರ ಅಥವಾ ಸಾಮಗ್ರಿಯನ್ನು ಕಳುಹಿಸು. ಸಾಗಿಸು ಎಂಬ ಅರ್ಥಗಳನ್ನು ಹೊಂದಿದೆ. ಮರಾಠಿಯ ರವಾನ + ಇಸು ಪ್ರತ್ಯಯ ಸೇರಿ ರವಾನಿಸು ಎಂದು ಕನ್ನಡದಲ್ಲಿ ಬಳಕೆಯಾಗಿದೆ.

ಪ್ರಯೋಗ – 'ಚಿತ್ರ ತೆಗೆದು ಭೂಮಿಗೆ ರವಾನಿಸಬೇಕು. ಮತ್ತೇ

ವಿರಮಿಸಬೇಕು'. ಇಲ್ಲಿ ರವಾನಿಸು ಎಂಬ ಪದವು ಕಳುಹಿಸು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೫)**

**ರಿಜರ್ವ್ :** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಮೀಸಲು, ನಿಗಧಿ, ಮುಂಗಡವಾಗಿ ಪಡೆಯುವುದು ೨)ಬ್ಯಾಂಕಿನ ಹೆಸರು ಎಂಬ ಅರ್ಥಗಳನ್ನು ಹೊಂದಿದೆ. ಇಂಗ್ಲೀಷಿನಲ್ಲಿ 'Reserve' ಎಂದು ಬಳಕೆಯಾಗಿದೆ.
ಪ್ರಯೋಗ – 'ಮಾಹಿತಿಯನ್ನು ರಿಜರ್ವ್ ಬ್ಯಾಂಕ್ ಇಂಡಿಯಾ ನೀಡಿರುವ ಸೂಚನೆಗಳಂತೆ ಸಂಗ್ರಹಿಸಲಾಗುತ್ತಿತ್ತು'. ಇಲ್ಲಿ ರಿಜರ್ವ್ ಎಂಬ ಪದ ಬ್ಯಾಂಕಿನ ಹೆಸರಾಗಿ ಪ್ರಯೋಗವಾಗಿದೆ. **(ಉ.ವಾಣಿ, ಜೂ.೪)**

**ರಿವಾಜು :** (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು, ಮಾಮುಲು, ಸಂಪ್ರದಾಯ, ಪದ್ಧತಿ, ರೂಢಿ, ರೀತಿ ಎಂಬ ಅರ್ಥಗಳನ್ನು ಕೊಡುತ್ತದೆ. ಅರೆಬ್ಬಿ, ಹಿಂದಿ, ಮರಾಠಿಯಲ್ಲಿ ರಿವಾಜ್, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ 'ರಿವಾಜು' ಎಂದು ಬಳಕೆಯಾಗಿದೆ.
ಪ್ರಯೋಗ – 'ರೀತಿ, ನೀತಿಯ ರಿವಾಜುಗಳನ್ನು ಗಮನಿಸುವವರಿಗೆ ಅಚ್ಚರಿ ಎಂಬುದು ಇನಿತೂ ಇಲ್ಲ'. **(ಸಂಯುಕ್ತ ಕರ್ನಾಟಕ, ಜೂ.೩)**

**ಸರ್ಕಸ್ಸು :** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಮನುಷ್ಯರ ಕಸರತ್ತು ಮತ್ತು ನಾನಾಬಗೆಯ ಪ್ರಾಣಿಗಳು ನೀಡುವ ಆಟಗಳ ಪ್ರದರ್ಶನ, ಅಂತಹ ಸ್ಥಳ ಎಂಬ ಅರ್ಥಗಳನ್ನು ಕೊಡುತ್ತದೆ. ಇದು ಕನ್ನಡದಲ್ಲಿ ಬಳಕೆಯಾಗುವಾಗ ಕಸರತ್ತು ಎಂಬ ಅರ್ಥದಲ್ಲಿ ಪ್ರಯೋಗವಾಗುತ್ತದೆ. ಉದಾ : 'ಘಟಿಂಗರ ಸರ್ಕಸ್ಸು ಸ್ವತಂತ್ರವಾಗದೇ ಅಂತೂ ಅತಂತ್ರವೇ ಆಯಿತು'. **(ಸಂ.ಕರ್ನಾಟಕ ಜೂ.೨)**

**ಸಲೀಸಾಗಿ :** (ಗುಣಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ೧) ಸರಾಗವಾದ, ನೇರವಾದ, ನಿರಾತಂಕವಾದ ೨) ಸುಲಭ, ಸರಾಗ ೩) ಸುಖವಾದದ್ದು, ಸೌಕರ್ಯದಿಂದ ಕೂಡಿರುವುದು ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿ, ಹಿಂದಿ, ಮರಾಠಿಯಲ್ಲಿ ಸಲೀಸ್ ಎಂದು, ಕನ್ನಡದಲ್ಲಿ ಸಲೀಸು, ಸಲಿಸು, ಸಲೀಸ್ ಎಂದು ಬಳಕೆಯಾಗಿದೆ.
ಪ್ರಯೋಗ – 'ರಾಜಕಾರಣಿಗಳು ಸಲೀಸಾಗಿ ಉಪಯೋಗಿಸುವ ಅಭಿವೃದ್ಧಿ ಸೇವೆ ಶಬ್ದಗಳು ಬಲು ತಮಾಷೆಯಾಗಿ ಕೇಳುತ್ತವೆ'. ಇಲ್ಲಿ ಸಲೀಸು ಎಂಬ ಸುಲಭ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೬)**

**ಹಜಾರ** : (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ಒಂದು ಸಂಖ್ಯೆ, ಸಾವಿರ, ಸಹಸ್ರ ಎಂಬ ಅರ್ಥದಲ್ಲಿ ಬಳಕೆಯಾಗಿದೆ. ಪಾರಸಿ, ಹಿಂದಿ, ಮರಾಠಿಯಲ್ಲಿ ಹಜಾರ್ ಎಂದು, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಹಜಾರ' ಎಂದು ಬಳಕೆಯಾಗಿದೆ.

ಪ್ರಯೋಗ – 'ನಡುಮನೆಯ ಹಜಾರ ಬಿಟ್ಟು ಹೊರಗೆ ಬಂದದ್ದರಿಂದ ಅಭ್ಯರ್ಥಿಗಳ ಮಡದಿಯರೆಲ್ಲ ಪುಗಸಟ್ಟೆ ಗಂಡನ ಪರವಾಗಿ ಕಂಡ–ಕಂಡವರಿಗೆ ಸೆರಗೊಡ್ಡಿಬೇಡಿದ್ದಾಯಿತು'. **(ಸಂ.ಕರ್ನಾಟಕ, ಜೂ.೩)**

**ಹೈಟೆಕ್ ಟಚ್** : (ಕ್ರಿಯಾಪದ) ಇಂಗ್ಲೀಷಿನಿಂದ ಬಂದಿದ್ದು. ಮುಟ್ಟು, ತಟ್ಟು ಎಂಬ ಅರ್ಥವನ್ನು ಕೊಡುತ್ತದೆ. ಇಂಗ್ಲೀಷಿನಲ್ಲಿ 'Hightech Touch' ಎಂದು ಬಳಕೆಯಾಗಿದೆ.

ಪ್ರಯೋಗ – 'ಜನರ ಬದುಕಿಗೆ ಈಗ 'ಹೈಟೆಕ್‌ಟಚ್'. **(ಕ.ಪ್ರಭ, ಜೂ.೨)**

ಒಟ್ಟಾರೆಯಾಗಿ ಕನ್ನಡ ದಿನಪತ್ರಿಕೆಗಳ ಅಂಕಣಗಳಲ್ಲಿಯ ಅನ್ಯಭಾಷಾ ಪದಗಳ ಬಳಕೆಯನ್ನು ಗಮನಿಸಿದಾಗ ಬಹುತೇಕ ಪದಗಳು ನಾಮಪದಗಳಾಗಿದ್ದು, ಕ್ರಿಯಾಪದ, ಗುಣಪದಗಳಿಗೆ ಸಂಬಂಧಿಸಿದ ಪದಗಳ ಸಂಖ್ಯೆ ತುಂಬಾ ಕಡಿಮೆ. **'ವಿಜಯ ಕರ್ನಾಟಕ'** ದಲ್ಲಿ ಪಾರಸಿ, ಹಿಂದಿ ಹಾಗೂ ಮರಾಠಿ ಪದಗಳು ಸಮಪ್ರಮಾಣದಲ್ಲಿ ಬಳಕೆಯಾಗಿದ್ದು, ಅರೆಬ್ಬಿಕ್ ಪದಗಳು ಕಡಿಮೆ. ಇಂಗ್ಲೀಷ್ ಪದಗಳು ಶೇ.೪೫ ರಷ್ಟು ಬಳಕೆಯಾಗಿದ್ದು ಕಂಡುಬಂದಿದೆ. ಅದೇ ರೀತಿಯಾಗಿ **'ಸಂಯುಕ್ತ ಕರ್ನಾಟಕ'** ದಲ್ಲಿ ಅರೆಬ್ಬಿಕ್ ಹಾಗೂ ಮರಾಠಿ ಪದಗಳ ಬಳಕೆ ಹೆಚ್ಚಾಗಿದ್ದು, ಹಿಂದಿ ಮತ್ತು ಪಾರಸಿ ಪದಗಳು ಕಡಿಮೆ ಬಳಕೆಯಾಗಿವೆ. ಇಂಗ್ಲೀಷ್ ಪದಗಳು ಶೇ. ೬೫ ರಷ್ಟು ಬಳಕೆಯಾಗಿವೆ. ಅದೇ ರೀತಿಯಾಗಿ **'ಕನ್ನಡಪ್ರಭ'** ದಲ್ಲಿ ಪಾರಸಿ ಪದಗಳ ಸಂಖ್ಯೆ ಹೆಚ್ಚಾಗಿದ್ದು, ಅರೆಬ್ಬಿಕ್, ಹಿಂದಿ ಹಾಗೂ ಮರಾಠಿ ಪದಗಳ ಬಳಕೆ ಕಡಿಮೆಯಾಗಿದೆ. ಇಂಗ್ಲೀಷ್ ಪದಗಳ ಬಳಕೆ ಶೇ.೬೫ ರಷ್ಟು ಕಂಡು ಬಂದಿದೆ. **'ಉದಯವಾಣಿ'** ಯಲ್ಲಿ ಅರೆಬ್ಬಿಕ್ ಮತ್ತು ಪಾರಸಿ ಪದಗಳ ಬಳಕೆ ಹೆಚ್ಚಾಗಿ ಕಂಡುಬಂದರೆ, ಮರಾಠಿ ಹಾಗೂ ಹಿಂದಿ ಪದಗಳ ಬಳಕೆ ಕಡಿಮೆಯಾಗಿದೆ. ಇಂಗ್ಲೀಷ್ ಪದಗಳು ಶೇ.೩೫ ರಷ್ಟು ಕಂಡು ಬಂದಿವೆ. **'ಪ್ರಜಾವಾಣಿ'** ಯಲ್ಲಿ ಅರೆಬ್ಬಿಕ್, ಮರಾಠಿ ಹಾಗೂ ಪಾರಸಿ ಪದಗಳು ಹೆಚ್ಚಾಗಿ ಬಳಕೆಯಲ್ಲಿದ್ದು, ಹಿಂದಿ ಪದಗಳ ಬಳಕೆ ಕಡಿಮೆಯಾಗಿದೆ. ಇಂಗ್ಲೀಷ್ ಪದಗಳು ಶೇ.೪೫ ರಷ್ಟು ಬಳಕೆಯಾದದ್ದು ಕಂಡುಬಂದಿದೆ. ಅಲ್ಲೊಂದು ಇಲ್ಲೊಂದು ಪೋರ್ಚುಗಿಸ್ ಪದಗಳೂ ಬಳಕೆಯಾಗಿವೆ.

## ೩.೩. ಕ್ರೀಡಾಪುರವಣಿಯಲ್ಲಿ ಅನ್ಯಭಾಷಾ ಬಳಕೆ

ಕ್ರೀಡೆಗೆ ಸಂಬಂಧಿಸಿದ ವಿಷಯಗಳ ಸುದ್ದಿಗಳನ್ನು ಪ್ರಸಾರ ಮಾಡುವ ಪತ್ರಿಕೆಯ ಪುಟವನ್ನು ಕ್ರೀಡಾಪುಟ ಎಂದು, ವಿಶೇಷ ದಿನಗಳಲ್ಲಿ ನಡೆದ ಆಟಗಳ ಹೆಚ್ಚಿನ ಮಾಹಿತಿ ಯನ್ನು ನೀಡುವ ಪತ್ರಿಕೆಯ ನಿರ್ದಿಷ್ಟ ಪುಟವನ್ನು ಕ್ರೀಡಾ ಪುರವಣಿ ಎಂದು ಕರೆಯಲಾ ಗುತ್ತದೆ. ಪ್ರತಿಯೊಂದು ಕನ್ನಡ ದಿನಪತ್ರಿಕೆಗಳೂ ಕೂಡ ಕ್ರೀಡೆಯ ಮಾಹಿತಿ ನೀಡುವುದಕ್ಕಾಗಿ ನಿರ್ದಿಷ್ಟವಾದ ಪುಟಗಳನ್ನು ಮೀಸಲಾಗಿಡುವುದು ಕಂಡು ಬರುತ್ತದೆ.

ಜಾಗತಿಕ ಮಟ್ಟದಲ್ಲಿ ಕ್ರೀಡೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗುತ್ತದೆ. ಅಲ್ಲದೆ ಯುವ ಜನಾಂಗವನ್ನು ಬಹುಬೇಗನೆ ತನ್ನ ಕಡೆಗೆ ಸೆಳೆದುಕೊಳ್ಳುವ ಕ್ಷೇತ್ರವಾಗಿ, ಕ್ರೀಡೆ ಮನುಷ್ಯನ ಅವಿಭಾಜ್ಯ ಅಂಗವಾಗಿದ್ದರಿಂದ ಶಾರೀರಿಕ ಬೆಳವಣಿಗೆಗೆ ಕ್ರೀಡೆ ಉಸಿರಾಟದಷ್ಟೇ ಮುಖ್ಯವಾಗಿದೆ. ಶಾರೀರಿಕ, ಬೌದ್ಧಿಕ ವಿಕಾಸವನ್ನುಂಟು ಮಾಡುವ ಪ್ರಮುಖ ಕ್ರೀಡೆಗಳೆಂದರೆ, ಫುಟ್‌ಬಾಲ್, ವಾಲಿಬಾಲ್, ಕ್ರಿಕೆಟ್, ಕೋಕೋ, ಕಬ್ಬಡ್ಡಿ, ಟೆನ್ನಿಸ್, ಚೆಸ್, ಸ್ನೂಕರ್, ಅಥ್ಲೆಟಿಕ್ಸ್, ಟೇಬಲ್ ಟೆನ್ನಿಸ್ ಹಾಗೂ ಬ್ಯಾಡ್ಮಿಂಟನ್ ಮುಂತಾದವುಗಳು. ಈ ಮೇಲಿನ ಎಲ್ಲಾ ಆಟಗಳು ವಿಶೇಷ ಸಂದರ್ಭಗಳಲ್ಲಿ ಮಾತ್ರ ನಡೆಯುತ್ತಿದ್ದು, ಇತ್ತೀಚಿನ ದಿನಮಾನಗಳಲ್ಲಿ ಹೆಚ್ಚಿನ ಜನಪ್ರಿಯತೆಯನ್ನು ಪಡೆದುಕೊಳ್ಳುತ್ತಿವೆ. ಪ್ರತಿಯೊಂದು ಆಟಗಳಿಗೂ ನಿರ್ದಿಷ್ಟವಾದ ಹೆಸರುಗಳಿದ್ದು ಅವುಗಳನ್ನು ರೋವರ್‌ಕಪ್, ಫಡರೇಶನ್‌ಕಪ್, ವಿಶ್ವಕಪ್, ರಣಜಿ ಟ್ರೋಫಿ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ.

ಪ್ರತಿಯೊಂದು ಕನ್ನಡ ದಿನಪತ್ರಿಕೆಗಳು ಜಾಗತಿಕವಾಗಿ ಮಾನ್ಯತೆಯನ್ನು ಪಡೆದ ಕ್ರೀಡೆಗಳ ಮಾಹಿತಿಯನ್ನು ಆಯಾ ಪತ್ರಿಕೆಗಳು ನಿಗದಿಪಡಿಸಿದ ಪುಟದಲ್ಲಿ ಪ್ರಕಟ ಮಾಡುತ್ತವೆ. ಆ ಮೂಲಕ ಪತ್ರಿಕೆಗಳು ಜ್ಞಾನದ ದಿಗಂತವನ್ನು ತೆರೆಯುವ ಕ್ಷೇತ್ರವಾಗಿ, ಅದೊಂದು ಉದ್ದಿಮೆಯಾಗಿ ಬೆಳೆಯುತ್ತಿದೆ. ಈಗಾಗಲೇ ಮುಗಿದಿರುವ ಆಟಗಳ ಸುದ್ದಿ, ನಡೆಯುತ್ತಿರುವ ಆಟಗಳ ಸುದ್ದಿ, ಮುಂದೆ ನಡೆಯಲಿರುವ ಆಟಗಳ ಸುದ್ದಿಗಳನ್ನು ನಿರ್ದಿಷ್ಟವಾದ ಆಕರ್ಷಕ ಪುಟದಲ್ಲಿ ವರ್ಣರಂಜಿತ ಚಿತ್ರಗಳೊಂದಿಗೆ ಪ್ರಕಟ ಮಾಡಿ ಆ ಮೂಲಕ ಕ್ರೀಡಾಸಕ್ತರ ಗಮನವನ್ನು ಸೆಳೆಯುತ್ತಿವೆ. ಕೆಲವು ಅಂಕಣಕಾರರು, ಅಂಕಣ ಬರಹದ ಮೂಲಕ ಕ್ರೀಡೆ, ಕ್ರೀಡಾ ಸಂಸ್ಥೆ, ಕ್ರೀಡೆಗೆ ಸಂಬಂಧಿಸಿದ ಸಂಘ ಸಂಸ್ಥೆಗಳ ಮತ್ತು ಅವುಗಳ ಕಾರ್ಯಚಟುವಟಿಕೆಗಳ ಬಗ್ಗೆ ಓದುಗರಿಗೆ ಮಾಹಿತಿಯನ್ನು ನೀಡುತ್ತಾರೆ.

ಭಾಷಾ ಬಳಕೆಯ ದೃಷ್ಟಿಯಿಂದ ಕ್ರೀಡಾಪುರವಣಿಯಲ್ಲಿ ಬಳಕೆಯಾದ ಭಾಷೆ (ತಲೆಬರಹ) ಅತ್ಯಂತ ಆಕರ್ಷಕವಾಗಿದ್ದು, ಪತ್ರಿಕೆಯ ಇತರ ಪುಟಗಳ ಭಾಷೆಗಿಂತ ಭಿನ್ನವಾಗಿರುವುದರ ಜೊತೆಗೆ ಆಟಗಳು, ಆಟಗಳಿಗೆ ಸಂಬಂಧಿಸಿದ ಪದಗಳು ಅತೀ ಹೆಚ್ಚಾಗಿ ಇಂಗ್ಲೀಷ್ ಭಾಷೆಯ ಪದಗಳಾಗಿರುತ್ತವೆ. ಬಹುತೇಕ ಆಟದ, ಅದಕ್ಕೆ ಸಂಬಂಧಿಸಿದ ಪದಗಳು ಇಂಗ್ಲೀಷ್‌ನಲ್ಲಿಯೇ ಇದ್ದು, ನಾಮಪದಗಳಾಗಿರುವುದಲ್ಲದೇ ವ್ಯಂಜನಾಂತ್ಯದೊಂದಿಗೆ

ಬಳಕೆಯಾಗುತ್ತವೆ. ಅಲ್ಲದೆ ಕೆಲವು ದೇಶಿ ಪದಗಳಿಗೆ ಇಂಗ್ಲೀಷ್ ರೂಪಗಳನ್ನು, ಇನ್ನೂ ಕೆಲವು ಬಾರಿ ಇಂಗ್ಲೀಷ್ ಪದಗಳಿಗೆ ಕನ್ನಡದ ಸಂವಾದಿ ಪದಗಳು ಬಳಕೆಯಾಗುತ್ತವೆ.

ಉದಾ : ಜಾವಲಿನ್ ಥ್ರೋ – ಬಲ್ಲೆ ಎಸೆತ
ಟೀಂ – ತಂಡ
ಪ್ಲೇಯರ್ – ಆಟಗಾರ
ಫೀಲ್ಡ್ – ಕ್ಷೇತ್ರ ಇತ್ಯಾದಿ.

ಅದೇ ರೀಯಾಗಿ ಇಂಗ್ಲೀಷ್ ಕನ್ನಡದ ಸಂವಾದ ಪದಗಳ ಬಳಕೆ

ಉದಾ : ಪಂದ್ಯ ಪುರುಷೋತ್ತಮ, ಉಪಾಂತ್ಯ,
ಕ್ಷೇತ್ರ ರಕ್ಷಣೆ, ಅಂಕಣ ಇತ್ಯಾದಿ.

ಪತ್ರಿಕೆಯ ಮುಖಪುಟದ ಭಾಷೆಗಿಂತಲೂ ಕ್ರೀಡಾಪುಟದಲ್ಲಿ ಬಳಕೆಯಾಗುವ ಭಾಷೆ ಭಿನ್ನವಾಗಿ ಕಂಡು ಬರುತ್ತದೆ. ಆ ಮೂಲಕ ಕನ್ನಡ ಪದಕೋಶದ ಬೆಳವಣಿಗೆಗೆ ಸಹಾಯಕವಾಗಿದೆ. ಕ್ರೀಡಾ ಪುರವಣಿಯಲ್ಲಿ ಬಳಕೆಯಾಗುವ ತಲೆಬರಹ ಆಕರ್ಷಕ ಭಾಷೆಯನ್ನು ಒಳಗೊಂಡಿರುವುದು ಕಂಡು ಬರುತ್ತದೆ. ಅಲ್ಲದೇ ಅತಿ ಹೆಚ್ಚು ಇಂಗ್ಲೀಷ್ ಭಾಷೆಯ ಜೊತೆಗೆ ಅಲ್ಲಲ್ಲಿ ಪರ್ಷೊ ಅರೆಬ್ಬಿಕ್, ಪಾರಸಿ, ಹಿಂದಿ, ಮರಾಠಿ ಪದಗಳು ಬಳಕೆಯಾಗುತ್ತವೆ.

ಉದಾ : ಸಿಂಹಗಳ ಮೇಲೆ ಕಾಂಗರೂಗಳ 'ಸವಾರಿ'

ಇಲ್ಲಿ 'ಸವಾರಿ' ಎಂಬ ಪದವು ಪಾರಸಿ ಮೂಲದಿಂದ ಬಂದಿದ್ದು. (ನಾಮಪದ)

೧) ಪ್ರಾಣಿ, ವಾಹನ ಇತ್ಯಾದಿಗಳ ಮೇಲೆ ಕುಳಿತು ಹೋಗುವುದು, ತೆರಳುವುದು.
೨) ಸಂಚಾರ, ತಿರುಗಾಟ.
೩) ಮೆರವಣಿಗೆ.
೪) ರಾಜರು ಮುಂತಾದ ಹಿರಿಯರನ್ನು ಉದ್ದೇಶಿಸುವಾಗ ಬಳಸುವ ಮಾತು, ಗಣ್ಯ ಪುರುಷರನ್ನು ಸಂಭೋದಿಸುವಾಗ ಬಳಸುವ ನುಡಿ.
೫) ಗಾಡಿಗೆ ಕಟ್ಟುವ ಬಿದಿರಿನ ರಚನೆ, ಬಂಡಿಯಲ್ಲಿರುವ ಬಿದಿರಿನ ರಚನೆ.
೬) ಮಲ್ಲಯುದ್ಧದ ಒಂದು ಪೆಟ್ಟು – ವರಸೆ ಇತ್ಯಾದಿ.

ಹೀಗೆ ವಿವಿಧ ಅರ್ಥಗಳನ್ನು ಕೊಡುತ್ತಿದ್ದು.

ಪಾರಸಿಯಲ್ಲಿ – ಸುವಾರೀ, ಸವಾರೀ
ಹಿಂದಿಯಲ್ಲಿ – ಸವಾರೀ, ಸ್ವಾರೀ
ಮರಾಠಿಯಲ್ಲಿ – ಸವಾರಿ, ಸ್ವಾರೀ, ಸುವಾರೀ ಎಂದು ಬಳಕೆಯಲ್ಲಿದೆ.

ಆದರೆ 'ಸಿಂಹಗಳ ಮೇಲೆ ಕಾಂಗರೂಗಳ ಸವಾರಿ' ಎಂಬ ವಾಕ್ಯದಲ್ಲಿ ಸವಾರಿ ಎಂಬುದು ಆಕ್ರಮಣ, ದಾಳಿ ಎಂಬ ಅರ್ಥದಲ್ಲಿ ಬಳಕೆಯಾಗಿದೆ.

ಕ್ರೀಡಾ ಪುರವಣಿಯಲ್ಲಿ ಬಳಕೆಯಾಗುವ ತಲೆಬರಹ (ಶೀರ್ಷಿಕೆ) ಗಳಲ್ಲಿ ಆಟಗಳು ಮತ್ತು ಆಟಗಳಿಗೆ ಸಂಬಂಧಿಸಿದ ಬಹುತೇಕ ಪದಗಳ ಇಂಗ್ಲೀಷ್‌ನಲ್ಲಿದ್ದು ಕೆಲವೊಮ್ಮೆ ಇಂಗ್ಲೀಷ್ ಭಾಷೆಯನ್ನು ಕನ್ನಡದಲ್ಲಿ ಬಳಸುವುದು ಕಂಡು ಬರುತ್ತದೆ.

ಉದಾ : ಪಿಚ್, ಪ್ಯಾಡ್, ವಿಕೇಟ್, ನೆಟ್, ಚೆಸ್, ಹ್ಯಾಟ್ರಿಕ್, ಗ್ರೌಂಡ್, ಬಾಲ್, ಬ್ಯಾಟ್ ಇತ್ಯಾದಿ.

(ಪಿಚ್-ಅಂಗಣ, 'ಇಂದು ಅಂಗಣ (ಪಿಚ್)ಕ್ಕಿಳಿಯುವ ಬಾಂಗ್ಲಾ-ಭಾರತ'.

ಕನ್ನಡ ದಿನಪತ್ರಿಕೆಗಳಲ್ಲಿ ಪ್ರತಿದಿನದ ಕೊನೆಯ ಪುಟದಲ್ಲಿ ಆಟಗಳಿಗೆ ಸಂಬಂಧಿಸಿದ ಸುದ್ದಿಗಳಿದ್ದು, ಕ್ರೀಡೆಗೆ ಸಂಬಂಧಿಸಿದ ವಿಶೇಷ ಪುರವಣಿ ಪ್ರತ್ಯೇಕವಾದ ಭಾಗದಲ್ಲಿದ್ದು ಕ್ರೀಡಾ ವರದಿಗಳನ್ನು ಪ್ರಕಟ ಮಾಡುತ್ತವೆ. ಈ ಭಾಗದಲ್ಲಿ ಇಂಗ್ಲೀಷ್ ಭಾಷೆ ಬಹುವಾಗಿ ಕಂಡು ಬಂದಿದ್ದು, ಆಟಗಳು ಮತ್ತು ಆಟಗಳಿಗೆ ಸಂಬಂಧಿಸಿದ ಬಹುತೇಕ ಪದಗಳು ಇಂಗ್ಲೀಷಿನದ್ದೆ ಆಗಿರುತ್ತದೆ ಎಂಬುದನ್ನು ಈಗಾಗಲೇ ತಿಳಿಸಲಾಗಿದೆ.

ಕ್ರೀಡಾಪುರವಣಿಯಲ್ಲಿ ಬಳಕೆಯಾದ ಅನ್ಯಭಾಷೆಯ ಪದಗಳನ್ನು ಗಮನಿಸಲಾಗಿ ಶೀರ್ಷಿಕೆಯ (ತಲೆಬರಹ)ಲ್ಲಿ ಬಳಕೆಯಾಗುವ ಪದಗಳು ಹೆಚ್ಚು ಇಂಗ್ಲೀಷ್ ಶೀರ್ಷಿಕೆಯ ನಂತರ ಬರುವ ಆರಂಭಿಕ ಟಿಪ್ಪಣಿ (Lead) ಹಾಗೂ ವರದಿಯಲ್ಲಿ ಹೆಚ್ಚಾಗಿ ಬರಹದ ಕನ್ನಡ ಬಳಕೆಯಾಗುವುದರ ಜೊತೆಗೆ ಅಲ್ಲೊಂದು ಇಲ್ಲೊಂದು ಅರೆಬ್ಬಿಕ್, ಹಿಂದಿ, ಪಾರಸಿ, ಮರಾಠಿ ಪದಗಳು ಕಾಣಿಸಿಕೊಳ್ಳುತ್ತವೆ. ಇಂಗ್ಲೀಷ್ ಪದಗಳನ್ನು ಹೊರತು ಪಡಿಸಿ ನೋಡಲಾಗಿ ಅನ್ಯಭಾಷಾ ಪದಗಳ ಬಳಕೆ ತುಂಬಾ ಕಡಿಮೆ ಎಂದು ಹೇಳಬಹುದು.

ಈ ಮೇಲಿನ ಸಂಗತಿಯನ್ನು ಗಮನಿಸಿದಾಗ ಕ್ರೀಡಾಪುರವಣಿ ಶೀರ್ಷಿಕೆಗಾಗಿ ಆಧುನೀಕರಣದ ಭಾಷೆಯನ್ನು ಅವಲಂಬಿಸಿದ್ದರೆ, ಆರಂಭಿಕ ಟಿಪ್ಪಣಿ ಹಾಗೂ (Lead) ಹಾಗೂ ವರದಿಯು ಪ್ರಮಾಣೀಕರಣದ ಭಾಷೆಯನ್ನು ಅವಲಂಬಿಸಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.



ಕ್ರೀಡಾ ಪುರವಣಿಯಲ್ಲಿ ಬಳಕೆಯಾಗುವ ಇಂಗ್ಲೀಷ್ ಪದಗಳು ನಾಮಪದಗಳಾಗಿದ್ದು, ವ್ಯಂಜನಾಂತ್ಯ ಪದಗಳು ಕಂಡುಬರುತ್ತವೆ. ಬಹುತೇಕ ಆಟದ ಹೆಸರುಗಳು ಮತ್ತು ಆಟಕ್ಕೆ ಸಂಬಂಧಿಸಿದ ಪದಗಳನ್ನು ಉದಾಹರಣೆಯಾಗಿ ನೋಡಬಹುದು.

ಆಟಕ್ಕೆ ಸಂಬಂಧಿಸಿದ ಪದಗಳು : ಬಾಲ್, ಬ್ಯಾಟ್, ಪಿಚ್, ಸ್ಕೋರ್, ಫೋರ್, ನಾಟೌಟ್, ಅಂಪಾಯರ್ ಇತ್ಯಾದಿ.

ಆಟಕ್ಕೆ ಸಂಬಂಧಿಸಿದ ಪದಗಳು : ಚೆಸ್, ಬ್ಯಾಡ್ಮಿಂಟನ್, ಟೆನಿಸ್, ಕ್ರಿಕೆಟ್ ಇತ್ಯಾದಿ.

ಕ್ರೀಡಾ ಪುರಣಿಯಲ್ಲಿ ಬಳಕೆಯಾಗುವ ಅನ್ಯಭಾಷೆಯ ಪದಗಳ ಬಗ್ಗೆ ಹೇಳುವುದಾದರೆ, ಆಟಕ್ಕೆ ಉಂಟು ಲೆಕ್ಕಕ್ಕೆ ಇಲ್ಲ ಎಂಬಂತೆ ಎಲ್ಲೊ ಒಮ್ಮೆ ಹಿಂದಿ, ಪಾರಸಿ, ಅರೆಬ್ಬಿಕ್, ಮರಾಠಿ ಭಾಷೆಯ ಪದಗಳು ಬಳಕೆಯಾಗುತ್ತವೆ. ಅತೀ ಹೆಚ್ಚು

ಇಂಗ್ಲೀಷ್ ಭಾಷೆಯ ಪದಗಳ ಪ್ರಭಾವ ಎದ್ದು ಕಾಣುತ್ತದೆ ಎಂದು ಈ ಹಿಂದೆ ಹೇಳಲಾಗಿದೆ. ಈ ಹಿನ್ನೆಲೆಯಲ್ಲಿ (ಇಂಗ್ಲೀಷ್‌ನ್ನು ಹೊರತು ಪಡಿಸಿ) ಅನ್ಯಭಾಷಾ ಪದಗಳ ಅರ್ಥ, ಬಳಕೆ, ಪ್ರಯೋಗವನ್ನು ಕುರಿತು ಚರ್ಚಿಸುವುದಕ್ಕಿಂತ ಇಂಗ್ಲೀಷ್ ಪದಗಳನ್ನು ಕುರಿತು (ಅಧ್ಯಯನದ ದೃಷ್ಟಿಯಿಂದ) ಚರ್ಚಿಸುವುದೇ ಹೆಚ್ಚು ಸೂಕ್ತವೆನಿಸುತ್ತದೆ.

ಕ್ರೀಡಾ ಪುರವಣಿಯಲ್ಲಿ ಬಳಕೆಯಾಗುವ ಇಂಗ್ಲೀಷ್ ಪದಗಳನ್ನು ಮುಖ್ಯವಾಗಿ ಮೂರು ರೀತಿಯಲ್ಲಿ ವರ್ಗೀಕರಿಸಬಹುದಾಗಿದೆ.

೧) ಆಟಗಳ ಹೆಸರುಗಳಿಗೆ ಸಂಬಂಧಿಸಿದ ಇಂಗ್ಲೀಷ್ ಪದಗಳು.

೨) ಆಟಗಳಿಗೆ ಸಂಬಂಧಿಸಿದ ಇಂಗ್ಲೀಷ್ ಪದಗಳು.

೩) ಭಾಷಾಂತರಿಸಿದ ಇಂಗ್ಲೀಷ್-ಕನ್ನಡ ಪದಗಳು.

## ಆಟಗಳ ಹೆಸರುಗಳಿಗೆ ಸಂಬಂಧಿಸಿದ ಇಂಗ್ಲೀಷ್ ಪದಗಳು

ಈಕ್ವೆಸ್ಟ್ರಿಯನ್
ಕೇರಮ್
ಕ್ರಿಕೆಟ್
ಗಾಲ್ಫ್
ಚೆಸ್
ಜಾವಲಿನ್‌ಥ್ರೋ
ಜೂಡೋ
ಟೆನ್ನಿಸ್/ಲಾನ್‌ಟೆನ್ನಿಸ್
ಟೇಬಲ್ ಟೆನ್ನಿಸ್
ಟ್ರಿಪಲ್‌ಜಂಪ್
ಡಿಸ್ಕಸ್‌ಥ್ರೋ
ಥ್ರೋಬಾಲ್
ಫುಟ್‌ಬಾಲ್
ಪೋಲೋ
ಬಾಕ್ಸಿಂಗ್
ಬಿಲಿಯರ್ಡ್ಸ್
ಬ್ಯಾಡ್ಮಿಂಟನ್
ಬ್ಯಾಸ್ಕೆಟ್‌ಬಾಲ್
ಮ್ಯಾರಥಾನ್
ರಗ್ಬಿ
ರನ್ನಿಂಗ್
ರಿಂಗ್‌ಬಾಲ್
ರಿಲೇ
ರೋಯಿಂಗ್
ಲಾಂಗ್‌ಜಂಪ್
ವಾಟರ್‌ಪೋಲೋ
ವಾಲಿಬಾಲ್
ವೈಟ್‌ಲೀಫ್ಟಿಂಗ್
ಶಾಟ್‌ಪುಟ್
ಶೂಟಿಂಗ್
ಶಟಲ್‌ಕಾಕ್
ಸಾಕರ್
ಸೈಕ್ಲಿಂಗ್
ಸ್ಕೇಟಿಂಗ್
ಸ್ನೂಕರ್
ಹಾಕಿ
ಹೈಜಂಪ್
ಹ್ಯಾಂಡ್‌ಬಾಲ್

## ಆಟಗಳ ಹೆಸರುಗಳಿಗೆ ಸಂಬಂಧಿಸಿದ ಇಂಗ್ಲೀಷ್ ಪದಗಳು

ಅಂಪೈಯರ್
ಅಕಾಡೆಮಿ
ಅಥ್ಲೆಟಿಕ್
ಅಥ್ಲೆಟಿಕ್ಸ್
ಆಫ್‌ವಿಚ್
ಆಫ್‌ಸೆಂಚುರಿ
ಆಫ್‌ಸೈಡ್
ಆಲೌಟ್
ಆಲ್‌ರೌಂಡರ್
ಇಲೆವನ್
ಎಕ್ಸ್‌ಟ್ರಾಕವರ್
ಎಲ್‌ಬಿಡಬ್ಲ್ಯೂ
ಏಷಿಯನ್ ಗೇಮ್ಸ್
ಒನ್‌ಡಾನ್
ಓಪನರ್
ಓಲಿಂಪಿಕ್ಸ್
ಓವರ್
ಔಟ್
ಕನೆಕ್ಟ್
ಕಪ್
ಕವರ್‌ಪಾಯಿಂಟ್
ಕಾಕ್
ಕಾಟ್ ಅಂಡ್ ಬೋಲ್ಡ್
ಕಾಮನ್‌ವೆಲ್ತ್
ಕಾರ್ನರ್
ಕಿಕ್‌ಔಟ್
ಕೀಪಿಂಗ್
ಕೋಚ್
ಕ್ಯಾಚ್/ಕ್ಯಾಚ್‌ಔಟ್
ಕ್ಯಾಪ್ಟನ್
ಕ್ರಾಸ್‌ಬಾರ್
ಕ್ರೀಸ್
ಕ್ಲಬ್
ಕ್ಲೀನ್ ಬೋಲ್ಡ್
ಕ್ಲೀನ್‌ಸ್ವೀಪ್
ಕ್ವಾರ್ಟರ್ ಫೈನಲ್

ಗಾಡ್ಸ್
ಗೂಗ್ಲಿ
ಗೇಮ್‌ಬ್ರೇಕ್
ಗೋಲ್
ಗೋಲ್ಡ್‌ಮೆಡಲ್
ಗೋಲ್‌ಲೈನ್
ಗ್ರಾಂಡ್‌ಫ್ರೀ
ಗ್ರಾಂಡ್‌ಸ್ಲಾಮ್
ಗ್ರೌಂಡ್
ಗ್ಲೌಸ್
ಚಾಂಪಿಯನ್
ಚಾಲೆಂಜರ್
ಜ್ಯೂನಿಯರ್ಸ್
ಟರ್ನಿಂಗ್/ಟರ್ನ್
ಟಾಸ್
ಟೀಮ್
ಟೂರ್ನಾಮೆಂಟ್
ಟೂರ್ನಿ
ಟೆನಿಸ್‌ಕೋರ್ಟ್
ಟೆಸ್ಟ್‌ಮ್ಯಾಚ್
ಟೈ
ಟೈಬ್ರೇಕರ್
ಟೈಮ್‌ಔಟ್
ಟ್ರಾಯಲ್
ಟ್ರಿಕ್ಸ್
ಟ್ರೋಫಿ
ಡಬಲ್ ಸೆಂಚುರಿ
ಡಬಲ್‌ಕಾಟ್
ಡಬಲ್ಸ್
ಡರ್ಟ್‌ಟ್ರ್ಯಾಕ್
ಡಿಕ್ಲೇರ್ಡ್
ಡಿಸಿಜನ್
ಡೆಡ್‌ಬಾಲ್
ಡೈವ್
ಡ್ರಾ
ಡ್ರಾಪಿಂಗ್
ಥರ್ಡ್‌ಡೌನ್
ನೆಟ್
ನೋಬಾಲ್
ಪಂಚ್
ಪಾಟ್ನರ್‌ಶಿಪ್
ಪಾಯಿಂಟ್
ಪಾಸ್
ಪಿಚ್
ಪೆನಾಲ್ಟಿ
ಪೆನಾಲ್ಟಿ ಕಾರ್ನರ್
ಪೆವಿಲಿಯನ್
ಪ್ಯಾಡ್
ಪ್ರಾಕ್ಟೀಸ್
ಪ್ಲೇಯರ್ಸ್
ಫಾರ್ಮ್
ಫಾರ್ಮುಲಾ
ಫಾಲ್ಟ್/ಡಬಲ್‌ಫಾಲ್ಟ್
ಫಾಸ್ಟ್‌ಬೌಲರ್
ಫಿಟ್‌ನೆಸ್
ಫೀಲ್ಡಿಂಗ್
ಫೆಡರೇಶನ್
ಫೆವರೆಟ್
ಫೈನಲ್
ಫೈನಲ್
ಫೋರ್
ಫ್ರಂಟ್‌ಫೂಟ್
ಫ್ರೇಮ್
ಬಾಲ್
ಬೀಟ್
ಬೈಸ್
ಬೋನಸ್
ಬೋಲ್ಡ್
ಬೌಂಡರಿ
ಬೌನ್ಸರ್
ಬೌಲರ್
ಬ್ಯಾಕ್‌ಸ್ಟ್ರೋಕ್
ಬ್ಯಾಕ್‌ಹ್ಯಾಂಡ್
ಬ್ಯಾಟ್
ಬ್ಯಾಟ್ಸಮನ್
ಬ್ಲಾಕಿಂಗ್
ಮಿಡ್ಲ್
ಮಿಸ್‌ಫೀಲ್ಡ್
ಮೆಡನ್/ಮೇಡಿಸ್
ಮ್ಯಾಚ್
ಮ್ಯಾನ್‌ಆಫ್‌ದಿಮ್ಯಾಚ್
ರನ್
ರನೌಟ್
ರನ್‌ರೇಟ್

ರಿಂಗ್
ರಿಟರ್ನ್
ರೆಡ್‌ಸಿಗ್ನಲ್
ರೆಫರಿ
ರೈಟ್‌ಹ್ಯಾಂಡ್
ರೈಡರ್/ಕಿಡರ್
ರೌಂಡ್
ರ್ಯಾಂಕಿಂಗ್
ಲೀಗ್‌ಮ್ಯಾಚ್
ಲೀಡ್
ಲೆಗ್
ಲೆಗ್‌ಬೈ
ಲೆಗ್‌ಸೈಟ್
ಲೆಫ್ಟ್‌ಹ್ಯಾಂಡ್
ಲೈನ್
ವರ್ಲ್ಡ್‌ಕಪ್
ವಿಂಬಲ್ಡನ್
ವಿಕೆಟ್
ವಿನ್ನರ್

ವೈಸ್‌ಕ್ಯಾಪ್ಟನ್
ಶಾಟ್
ಶೂಟೌಟ್
ಸಬ್‌ಜ್ಯೂನಿಯರ್ಸ್
ಸರ್ವ್
ಸರ್ವೀಸ್
ಸಿಂಗಲ್
ಸಿಕ್ಸರ್
ಸಿಗ್ನಲ್
ಸಿಲ್ಲಿಪಾಯಿಂಟ್
ಸಿಲ್ಲಿಮಿಡ್‌ಆಫ್
ಸೀನಿಯರ್ಸ್
ಸೀರಿಸ್
ಸೂಪರ್‌ಎಯ್ಡ್
ಸೆಂಚುರಿ
ಸೆಕೆಂಡ್‌ಡೌನ್
ಸೆಟ್
ಸೆಮಿಫೈನಲ್
ಸೆಲೆಕ್ಟ್

ಸ್ಕೋರ್
ಸ್ಕೋರ್‌ಬೋರ್ಡ್
ಸ್ಟಂಪ್
ಸ್ಟಿಕ್
ಸ್ಟೇಡಿಯಂ
ಸ್ಟ್ರೈಕರ್
ಸ್ಟ್ರೋಕ್
ಸ್ಪಿನ್ನರ್
ಸ್ಪೀಡ್
ಸ್ಪೋರ್ಟ್ಸ್
ಸ್ಕ್ವಾಷ
ಸ್ಲಿಪ್
ಸ್ವಿಂಗ್
ಹಿಟ್‌ಔಟ್
ಹೆಲ್ಮೆಟ್
ಹೆವಿವೇಯ್ಟ್
ಹ್ಯಾಟ್ರಿಕ್

## ಭಾಷಾಂತರಿಸಿದ ಇಂಗ್ಲೀಷ್–ಕನ್ನಡ ಪದಗಳು

ಕ್ರೀಡಾ ಪುರವಣಿಯ ಬಳಸಲಾಗುವ ಆಟಗಳ ಹೆಸರು ಹಾಗೂ ಆಟಗಳಿಗೆ ಸಂಬಂಧಿಸಿದ ಪದಗಳನ್ನು ಭಾಷಾಂತರಿಸಿ ಈಗಾಗಲೇ ಇದ್ದ ಕನ್ನಡ ಪದಗಳನ್ನು ಬಳಕೆ ಮಾಡುವುದು ಕಂಡು ಬರುತ್ತದೆ. ಉದಾ : ಗ್ರೌಂಡ್ ಎನ್ನುವ ಪದವನ್ನು ಮೈದಾನ ಎಂದು, ಒನ್ ಡೆ ಮ್ಯಾಚ್ ನ್ನು ಏಕದಿನ ಪಂದ್ಯ ಎಂದು ಬಳಕೆ ಮಾಡುವುದನ್ನು ನೋಡಬಹುದು. ಹೀಗೆ ಭಾಷಾಂತರಿಸಿದ (ಇಂಗ್ಲೀಷ್–ಕನ್ನಡ) ನೂರಾರು ಪದಗಳನ್ನು ಹೆಸರಿಸಬಹುದು.

| | | |
|---|---|---|
| ಅಂಪೈಯರ್ | – | ನಿರ್ಣಾಯಕ |
| ಅಥ್ಲೆಟ್ | – | ಕ್ರೀಡಾಪಟು / ಕ್ರೀಡಾಳು |
| ಅಪೀಲ್ | – | ಮನವಿ |
| ಇನ್ನಿಂಗ್ಸ್ | – | ಪಾಳಿ |
| ಎಕ್ಸ್‌ಟ್ರಾ ಪ್ಲೇಯರ್ | – | ಬದಲಿ ಆಟಗಾರ |
| ಒನ್ ಡೆ | – | ಏಕದಿನ ಪಂದ್ಯ |
| ಕಾಮೆಂಟ್ರಿ | – | ವೀಕ್ಷಕ ವಿವರಣೆ |
| ಕೋಚ್ | – | ತರಬೇತುದಾರ |
| ಕೋರ್ಟ್ | – | ಅಂಗಳ |
| ಕ್ಯಾಪ್ಟನ್ | – | ನಾಯಕ |
| ಗೇಮ್ಸ್ | – | ಆಟಗಳು |
| ಗೋಲ್ | – | ಗೋಲು |
| ಗೋಲ್ಡ್‌ಮೆಡಲ್ | – | ಸ್ವರ್ಣಪದಕ |
| ಗೋಲ್‌ಲೈನ್ | – | ಗೋಲುಪಟ್ಟಿ |
| ಗ್ರೂಪ್ | – | ಗುಂಪು |
| ಚೆಸ್ | – | ಚದುರಂಗ |
| ಜಾವೆಲಿನ್ ಥ್ರೋ | – | ಬಲ್ಲೆ ಎಸೆತ |
| ಜೂನಿಯರ್ಸ್ | – | ಕಿರಿಯರು |
| ಟೀಂ | – | ತಂಡ/ಪಡೆ/ಬಳಗ |
| ಟ್ರಿಕ್ಸ್ | – | ತಂತ್ರ |
| ಡಬಲ್ ಸೆಂಚುರಿ | – | ದ್ವಿಶತಕ |
| ಡಿಸ್ಕಸ್ ಥ್ರೋ | – | ಚಕ್ರ ಎಸೆತ |

| | |
|---|---|
| ನಾಟೌಟ್ | ಔಟಾಗದೆ |
| ಪಾರ್ಟ್ನರ್‌ಶಿಪ್ | ಜೊತೆಯಾಟ |
| ಪಿಚ್ | ಅಂಕಣ |
| ಪೋಸ್ಟ್ | ಕಂಬ |
| ಪ್ರಾಕ್ಟೀಸ್ | ಅಭ್ಯಾಸ |
| ಪ್ಲೇಯರ್ | ಆಟಗಾರ |
| ಫಸ್ಟ್‌ರೌಂಡ್ | ಒಂದನೇ ಸುತ್ತು |
| ಫಾಸ್ಟ್‌ಬೌಲರ್ | ವೇಗಿ |
| ಫೀಲ್ಡ್ | ಕ್ಷೇತ್ರ |
| ಫೀಲ್ಡರ್ಸ್ | ಕ್ಷೇತ್ರರಕ್ಷಕರು |
| ಫೇವರೇಟ್ | ನೆಚ್ಚಿನ ತಂಡ |
| ಫೈನಲ್ | ಅಂತಿಮ ಪಂದ್ಯ |
| ಬಾಲ್ | ಚೆಂಡು/ಎಸೆತ |
| ಬೌಂಡರಿಲೈನ್ | ಸೀಮಾರೇಖೆ |
| ಬ್ಯಾಟ್ | ದಾಂಡು |
| ಬ್ಯಾಟ್ಸ್‌ಮನ್ | ದಾಂಡಿಗ |
| ಮೆಡಲ್ | ಪದಕ |
| ಮ್ಯಾಚ್ | ಪಂದ್ಯ / ಆಟ |
| ಮ್ಯಾನ್ ಆಫ್ ದಿಮ್ಯಾಚ್ | ಪಂದ್ಯಪುರುಷ |
| ಮ್ಯಾನ್ ಆಫ್ ದಿ ಸಿರೀಸ್ | ಪಂದ್ಯಶ್ರೇಷ್ಠ |
| ರನ್ | ಓಟ |
| ರನ್ನರ್ | ಓಟಗಾರ |
| ರಿಂಗ್ | ಅಖಾಡ |
| ರೌಂಡ್ | ಸುತ್ತು |
| ರ್‍ಯಾಂಕಿಂಗ್ | ಶ್ರೇಯಾಂಕ |
| ಲಾಂಗ್‌ಜಂಪ್ | ಉದ್ದಜಿಗಿತ |
| ಲೀಡ್ | ಮುನ್ನಡೆ |
| ಲೆಫ್ಟ್‌ಹ್ಯಾಂಡ್ | ಎಡಗೈ |
| ವರ್ಲ್ಡ್ ರೆಕಾರ್ಡ್ | ವಿಶ್ವದಾಖಲೆ |
| ವರ್ಲ್ಡ್‌ಕಪ್ | ವಿಶ್ವಕಪ್ |

ವಿಕೇಟ್ – ಗೂಟ

ವಿಕೇಟ್ ಕೀಪರ್ – ಗೂಟ ರಕ್ಷಕ

ವಿನ್ನರ್ – ಜಯಶಾಲಿ

ವೆಯಿಟ್‌ಲಿಫ್ಟಿಂಗ್ – ಬಾರ ಎತ್ತುವ ಸ್ಪರ್ಧೆ

ವೈಸ್‌ಕ್ಯಾಪ್ಟನ್ – ಉಪನಾಯಕ

ಶಾಟ್ – ಹೊಡೆತ

ಶಾಟ್‌ಪುಟ್ – ಗುಂಡು ಎಸೆತ

ಸೀರಿಸ್ – ಸರಣಿ

ಸೂಪರ್‌ಏಯ್ಟ್ – ಎಂಟರಘಟ್ಟ

ಸೆಂಚುರಿ – ಶತಕ

ಸೆಂಟರ್‌ಪಾಯಿಂಟ್ – ಮಧ್ಯಭಾಗ

ಸೆಮಿಫೈನಲ್ – ಉಪಾಂತ್ಯ

ಸ್ಕೋರ್ – ಅಂಕ / ಮೊತ್ತ

ಸ್ಟೇಡಿಯಂ – ಮೈದಾನ

ಹಾಫ್ ಸೆಂಚುರಿ – ಅರ್ಧಶತಕ

ಹೈಜಂಪ್ – ಎತ್ತರಜಿಗಿತ

ಈ ಮೇಲಿನ ಪದಗಳು ಕ್ರೀಡಾ ಪುರವಣಿಯಲ್ಲಿ ಬಳಕೆಯಾಗುವಾಗ ಇಂಗ್ಲೀಷ್‌ನಿಂದ ಕನ್ನಡಕ್ಕೆ ಭಾಷಾಂತರಿಸುವಾಗ ಈ ಭಾಷಾಂತರ ಕ್ರಿಯೆ ಸಹಜವಾಗಿರದೇ ಪ್ರಯತ್ನಪೂರ್ವಕವಾಗಿರುತ್ತದೆ. ಅಂದರೆ ಸಾಮಾನ್ಯವಾಗಿ ಅತಿ ಹೆಚ್ಚು ಇಂಗ್ಲೀಷ್ ಪದಗಳೇ ಬಳಕೆಯಾಗುತ್ತವೆ.

## ೩.೪. ವಾಚಕರ ವಾಣಿ (ಓದುಗರ ಕಾಲಂ) ನಲ್ಲಿ ಅನ್ಯಭಾಷಾ ಬಳಕೆ

ಪತ್ರಿಕೆಯ ಓದುಗರು ಯಾವುದೇ ಒಂದು ವಿಷಯ. ವಸ್ತು ಸಂಗತಿಯನ್ನು ಕುರಿತು ಅಭಿಪ್ರಾಯ ವ್ಯಕ್ತಪಡಿಸುವ ಕಾಲಂನ್ನು ವಾಚಕರವಾಗಿ ಅಥವಾ ಓದುಗರ ಕಾಲಂ ಎಂದು ಕರೆಯಲಾಗುತ್ತದೆ. ಈ ಓದುಗರ ಕಾಲಂನ್ನು ಬೇರೆ ಬೇರೆ ಪತ್ರಿಕೆಗಳು ಬೇರೆ–ಬೇರೆ ಪುಟಗಳಲ್ಲಿ ಪ್ರಕಟ ಮಾಡುತ್ತವೆ. ಉದಾಹರಣೆಗೆ ಪ್ರಜಾವಾಣಿ ಹಾಗೂ ವಿಜಯ ಕರ್ನಾಟಕಗಳಲ್ಲಿ ಆರನೇ ಪುಟದಲ್ಲಿ ಓದುಗರ ಕಾಲಂ ಇದ್ದರೆ, ಉದಯವಾಣಿ ಹಾಗೂ ಕನ್ನಡಪ್ರಭದಲ್ಲಿ ಎಂಟನೇ ಪುಟದಲ್ಲಿ ಸಂಯುಕ್ತ ಕರ್ನಾಟಕದಲ್ಲಿ ನಾಲ್ಕನೇ ಪುಟದಲ್ಲಿ ಪ್ರಕಟವಾಗುತ್ತದೆ.

ವಾಚಕರವಾಣಿ (ಓದುಗರ ಕಾಲಂ)ಯನ್ನು ಬೇರೆ-ಬೇರೆ ಹೆಸರುಗಳಲ್ಲಿ ಕರೆಯಲಾಗುತ್ತದೆ. ಪ್ರಜಾವಾಣಿಯಲ್ಲಿ ವಾಚಕರ ವಾಣಿ, ವಿಜಯಕರ್ನಾಟದಲ್ಲಿ ವಾಚಕರ ವಿಜಯ, ಸಂಯುಕ್ತ ಕರ್ನಾಟಕದಲ್ಲಿ ಜನಮನ, ಉದಯವಾಣಿಯಲ್ಲಿ ಜನತಾವಾಣಿ ಹಾಗೂ ಕನ್ನಡಪ್ರಭದಲ್ಲಿ ಪತ್ರಪ್ರಭ ಎಂದು ಕರೆಯಲಾಗುತ್ತದೆ.

ಸಾಮಾನ್ಯವಾಗಿ ಎಲ್ಲಾ ಪತ್ರಿಕೆಯ ಓದುಗರ ಕಾಲಂ ಸಂಪಾದಕೀಯ ಹಾಗೂ ಲೇಖನ (ಅಂಕಣಗಳು) ಗಳು ಇರುವ ಪುಟದಲ್ಲಿಯೇ ಕಾಣಿಸಿಕೊಳ್ಳುತ್ತದೆ. ಒಟ್ಟು ಪುಟದ ಒಂದು ಭಾಗ ಸಂಪಾದಕೀಯವಿದ್ದರೆ, ಇನ್ನೊಂದು ಭಾಗ ಲೇಖನವಿರುತ್ತದೆ. ಮತ್ತೊಂದು ಭಾಗದಲ್ಲಿ ಓದುಗರ ಕಾಲಂ ಇರುತ್ತದೆ. ಓದುಗರ ಕಾಲಂ ಚಿಕ್ಕದಾಗಿ ಚೊಕ್ಕವಾಗಿದ್ದು, ೧೦೦ ಪದಗಳ ಮಿತಿಯನ್ನು ಹೊಂದಿದ್ದು ೨೦-೨೪ ಸಾಲುಗಳನ್ನು ಹೊಂದಿರುತ್ತದೆ. ಇಡೀ ಓದುಗರ ಕಾಲಂ ಕೆಲವೊಮ್ಮೆ ಒಂದೇ ವಿಷಯಕ್ಕೆ ಸಂಬಂಧಪಟ್ಟ ಒಂದೇ ಶೀರ್ಷಿಕೆಯ ಅಡಿಯಲ್ಲಿ ಮೂಡಿಬರುತ್ತದೆ. ಕೆಲವೊಂದು ಬಾರಿ ಬೇರೆ-ಬೇರೆ ವಿಷಯಕ್ಕೆ ಸಂಬಂಧಪಟ್ಟ ೪-೫ ಶೀರ್ಷಿಕೆಗಳನ್ನು ಒಳಗೊಂಡು ಮೂಡಿಬರುತ್ತದೆ. ಉದಾ: 'ಪರಿಹಾರ ಹೇಗೆ?' 'ದೇವ್‌ಬಂದ್' ಕ್ರಮ ಸರಿಯಲ್ಲ. ಸರ್ಕಾರಕ್ಕೆ ಕಿವಿಮಾತು ಹಾಗೂ ತಾರತಮ್ಯ ಬೇಡ ಎಂಬ ನಾಲ್ಕು ಶೀರ್ಷಿಕೆಗಳನ್ನು ಒಳಗೊಂಡ ಬೇರೆ-ಬೇರೆ ವಿಷಯವನ್ನು ನೋಡಬಹುದು (ಪ್ರಜಾವಾಣಿ, ಜೂನ್-೪).

ಸಾಮಾನ್ಯವಾಗಿ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಸಾಹಿತಿಕ, ಧಾರ್ಮಿಕ ಹಾಗೂ ಧಂಗೆ, ಗಲಭೆಗಳು, ಅಂತರಾಷ್ಟ್ರೀಯ ಒಪ್ಪಂದ, ರಾಜ್ಯ ದೇಶದ ಆಂತರಿಕ, ಬಾಹ್ಯ ಭದ್ರತೆಗೆ ಸಂಬಂಧಿಸಿದ ವಿಷಯಗಳು ಭಯೋತ್ಪಾದನೆ ಮುಂತಾದವುಗಳು ಓದುಗರ ಕಾಲಂ ಒಳಗೊಂಡಿರುವ ವಿಷಯಗಳಾಗಿರುತ್ತವೆ.

ಓದುಗರ ಕಾಲಂಗೆ ಪತ್ರ ಬರೆಯುವವರು ಕಾಯಂ ಪತ್ರಗಾರರಾಗಿರುವುದಿಲ್ಲ. ಸಂಭವಿಸಿದ ಯಾವುದೇ ಘಟನೆ, ಸಂಗತಿಯನ್ನು ಕುರಿತು ಯಾರು ಬೇಕಾದರೂ ಪತ್ರ ಬರೆಯುವ ಅವಕಾಶವನ್ನು ಎಲ್ಲಾ ಕನ್ನಡ ದಿನಪತ್ರಿಕೆಗಳು ಕಲ್ಪಿಸಿರುತ್ತವೆ. ಹಾಗಾಗಿ ಓದುಗರ ಕಾಲಂಗೆ ನಿರ್ದಿಷ್ಟ ಪತ್ರಗಾರರು ಇರುವುದಿಲ್ಲ.

ಈ ಕಾಲಂನಲ್ಲಿ ಬಳಕೆಯಾಗುವ ಭಾಷೆ ಸಾಮಾನ್ಯವಾಗಿ ಪ್ರಮಾಣೀಕರಣದ ಭಾಷೆ ಬಳಕೆಯಾಗುತ್ತಿದ್ದು, ನಮ್ಮ ಸುತ್ತಮುತ್ತ ಸಂಭವಿಸಬಹುದಾದ ಸಂಗತಿಗಳ ಪರಿಚಯ ಓದುಗನಿಗೆ ಇದ್ದಾಗ ಮಾತ್ರ ಈ ಕಾಲಂ ಅರ್ಥವಾಗುತ್ತದೆ. ಇದರಲ್ಲಿ ಕೆಲವು ಪ್ರಶ್ನೆಗಳಿರುತ್ತವೆ. ಇನ್ನೂ ಕೆಲವು ಬಾರಿ ಸಲಹೆಗಳೂ ಇರುತ್ತವೆ.

ವಾಚಕರ ವಾಣಿಯಲ್ಲಿ ಅರೆಬ್ಬಿಕ್, ಮರಾಠಿ, ಹಿಂದಿ, ಪಾರಸಿ ಹಾಗೂ ಇಂಗ್ಲೀಷ್ ಪದಗಳು ಬಳಕೆಯಾಗುತ್ತಿದ್ದು, ಈ ಅನ್ಯಭಾಷಾ ಪದಗಳ ಮೂಲ, ಅರ್ಥ ಹಾಗೂ ಪ್ರಯೋಗಗಳನ್ನು ನಿದರ್ಶನ ಸಹಿತವಾಗಿ ನೋಡಬಹುದು.

**ಅರ್ಜಿ** : (ನಾಮಪದ) ಪಾರಸಿ ಮೂಲದಿಂದ ಬಂದಿದ್ದು, ಅರಿಕೆ, ಪ್ರಾರ್ಥನಾ ಪತ್ರ ಎಂಬ ಅರ್ಥಗಳನ್ನು ಹೊಂದಿದೆ. ಪಾರಸಿಯಲ್ಲಿ ಅರ್ಜಿ, ಆರ್ಝ್ ಎಂದು, ಮರಾಠಿಯಲ್ಲಿ ಅರ್ಜಿ, ಹಿಂದಿಯಲ್ಲಿ ಅರ್ಜಿ ಎಂದು ಬಳಕೆಯಾದರೆ, ಕನ್ನಡದಲ್ಲಿ ಯಥಾವತ್ತಾಗಿ ಅರ್ಜಿ ಎಂದು ಬಳಕೆಯಾಗಿದೆ.
ಪ್ರಯೋಗ – 'ಇತರರು ಬರೆದ ಕೃತಿ. ವಿಮರ್ಶಕರನ ಮೂಗಿನ ನೇರಕ್ಕಿದ್ದರೆ ಲೇಖಕ ಬಚಾವು!'. ಇಲ್ಲಿ ಪಾರಾಗು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿಜಯ ಕರ್ನಾಟಕ, ಜೂ.೪)**

**ಇನ್ವೆಸ್ಟ್** : (ಕ್ರಿಯಾಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು, ಹಾಕು, ತೊಡಗಿಸು, ಖರ್ಚು ಎಂಬ ಅರ್ಥಗಳನ್ನು ಹೊಂದಿದೆ.
ಪ್ರಯೋಗ – 'ಲೇಖಕನಾದವನು ತನ್ನ ಪರಿಶ್ರಮ ಮತ್ತು ಪ್ರತಿಭೆಯನ್ನು ಇನ್ವೆಸ್ಟ್ ಮಾಡಬೇಕಾಗುತ್ತದೆ'. ಇಲ್ಲಿ ಇನ್ವೆಸ್ಟ್ ಎಂಬ ಪದವು ಖರ್ಚು ಮಾಡು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೪)**
ವಿಜಯ ಕರ್ನಾಟಕ ಪತ್ರಿಕೆಯ ಅಂಕಣಗಳಲ್ಲಿ ಕಂಡು ಬರುವ ಇತರ ಇಂಗ್ಲೀಷ್ ಪದಗಳು ನ್ಯೂಸ್‌ಪ್ರಿಂಟ್, ಅಸೋಸಿಯೇಷನ್, ಡೆಮಾಕ್ರೆಟಿಕ್, ರಿಫಾರ್ಮ್ ಇತ್ಯಾದಿ. (ವಿ.ಕರ್ನಾಟಕ, ಜೂ.೪)

**ಐಡಿಯಾ** : (ಗುಣಪದ) ಇಂಗ್ಲೀಷ್ ಮೂಲದಿಂದ ಬಂದಿದೆ. ಆಲೋಚನೆ ಎಂಬ ಅರ್ಥವನ್ನು ಹೊಂದಿದೆ.
ಪ್ರಯೋಗ – 'ಶಿಕ್ಷಣದ ಇಲಾಖೆಯ ಅಧಿಕಾರಿಗಳಿಗೆ ಹೊಳೆಯುವುದು ಎರಡು ಐಡಿಯಾಗಳು'. **(ಕನ್ನಡಪ್ರಭ, ಜೂ.೭)**

**ಕರಾರುವಕ್ಕು:** (ಗುಣಪದ) ಪಾರಸಿ ಮೂಲದಿಂದ ಬಂದಿದ್ದು. ಸರಿಯಾದ, ಹೆಚ್ಚು ಕಡಿಮೆ ಇಲ್ಲದ, ಕಟ್ಟುನಿಟ್ಟಾದ, ನಿಖರವಾದ ಎಂಬ ಅರ್ಥಗಳನ್ನು ಹೊಂದಿದೆ. ಪಾರಸಿಯಲ್ಲಿ ಕರಾರವಾಕಿಈ, ಮರಾಠಿಯಲ್ಲಿ ಕರಾರುವಾಕೇ, ಕರಾರುವಾಕೀ ಹಾಗೂ ಕರಾರವಾಕ್ಯೆ ಎಂದು ಬಳಕೆಯಲ್ಲಿದ್ದರೆ, ಕನ್ನಡದಲ್ಲಿ 'ಕರಾರುವಕ್ಕು' ಎಂದು ಬಳಕೆಯಲ್ಲಿದ್ದರೆ, ಕನ್ನಡದಲ್ಲಿ 'ಕರಾರುವಕ್ಕು' ಎಂದು ಬಳಕೆಯಾಗುವುದು.
ಪ್ರಯೋಗ – 'ಕನ್ನಡಪ್ರಭ ಕರಾರುವಕ್ಕಾದ ಸುದ್ದಿಯನ್ನು ಕೊಡುತ್ತದೆ'. ಇಲ್ಲಿ ಕರಾರುವಕ್ಕು ಎಂಬ ಪದವು ನಿಖರವಾದ, ಖಚಿತವಾದ ಎಂಬ ಅರ್ಥಗಳಲ್ಲಿ ಪ್ರಯೋಗವಾಗಿದೆ. **(ಕ.ಪ್ರಭ, ಜೂ.೬)**

**ಕಾರ್ಮಿಕ** : (ನಾಮಪದ) ಹಿಂದಿ ಮೂಲದಿಂದ ಬಂದಿದೆ. ಕಾರ್ಖಾನೆ ಮೊದಲಾದವುಗಳಲ್ಲಿ ಕೆಲಸ ಮಾಡುವವನು, ಕೆಲಸಗಾರ ಎಂಬ ಅರ್ಥಗಳನ್ನು

ಹೊಂದಿದೆ. ಹಿಂದಿ, ಮರಾಠಿ – ಕಾಮಗಾರ ಎಂದು, ಸಂಸ್ಕೃತದಲ್ಲಿ ಕರ್ಮಕಾರ ಎಂದು, ಕನ್ನಡದಲ್ಲಿ ಕಾರ್ಮಿಕ ಎಂದು ಬಳಕೆಯಲ್ಲಿದೆ.
ಪ್ರಯೋಗ – 'ಕೂಲಿಗಾರರು, ಕಾರ್ಮಿಕರು, ಸಮಾಜದ ಅತ್ಯಂತ ಕೆಳಸ್ಥರದಲ್ಲಿದ್ದವರು'. **(ಕ.ಪ್ರಭ, ಜೂ.೪)**

**ಕುಮ್ಮಕ್ಕು** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು, ಸಹಾಯ, ನೆರವು, ಒತ್ತಾಸೆ ಎಂಬ ಅರ್ಥಗಳನ್ನು ಹೊಂದಿದೆ. ಹಿಂದಿ, ಮರಾಠಿ, ತುರ್ಕಿಯಲ್ಲಿ ಕುಮಕ್ ಎಂದು ಬಳಕೆಯಾದರೆ ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ 'ಕುಮ್ಮಕ್ಕು' ಎಂದು ಬಳಕೆಯಾಗಿದೆ.
ಪ್ರಯೋಗ – 'ಭಯೋತ್ಪಾದನೆಗೆ ಕುಮ್ಮಕ್ಕು ನೀಡುವ ರಾಜಕೀಯ ನಿಲ್ಲಿಸದಿದ್ದರೆ, ಅಧೋಗತಿ'. ಇಲ್ಲಿ ಕುಮ್ಮಕ್ಕು ಎಂಬ ಪದವು ಸಹಾಯ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೨)**

**ಖಾಯಂ** : (ಗುಣಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು, ಸ್ಥಿರವಾದ, ಖಚಿತವಾದ, ಶಾಶ್ವತವಾದ ಎಂಬ ಅರ್ಥಗಳನ್ನು ಕೊಡುತ್ತದೆ. ಅರೆಬ್ಬಿಕ್ – ಕಾಈಮ್, ಹಿಂದಿ, ಮರಾಠಿ – ಕಾಯಮ್ ಎಂದು ಬಳಕೆಯಾದರೆ, ಕನ್ನಡದಲ್ಲಿ ಕಾಯಂ, ಖಾಯಂ ಎಂದು ಬಳಕೆಯಲ್ಲಿದೆ.
ಪ್ರಯೋಗ – 'ದಿನಗೂಲಿ ನೌಕರರ ಕೆಲಸ ಖಾಯಂ ಆಗಬೇಕು'. ಇಲ್ಲಿ ಖಾಯಂ ಎಂಬ ಪದವು ಖಚಿತ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೫)**

**ಜಬರ್ದಸ್ತು**: (ಗುಣಪದ) ಪಾರಸಿ ಮೂಲದಿಂದ ಬಂದಿದ್ದು. ೧)ಬಲಶಾಲಿಯಾದ, ದೃಢವಾದ, ಮಜಬೂತಾದ ೨) ಒತ್ತಾಯ, ಜೋರು, ದರ್ಪ, ಠಿಕುಠೀಕು, ವೈಭವ, ಠೀವಿ, ವಿಜೃಂಭಣೆ ಎಂಬ ಅರ್ಥಗಳನ್ನು ಹೊಂದಿದೆ. ಪಾರಸಿ, ಹಿಂದಿ, ಮರಾಠಿಯಲ್ಲಿ ಜಬರ್‌ದಸ್ತ್ ಎಂದು ಬಳಕೆಯಾಗಿದೆ.
ಪ್ರಯೋಗ – 'ಜನಸೇವೆ ಎಂಬುದು ಜಬರ್ದಸ್ತಾದ ಸೂಟು ಧರಿಸುವ ರಾಜಕೀಯದ ಒಳಗಿನ ಆಟ'. ಇಲ್ಲಿ ಮಜಬೂತಾದ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. ಇದೆ ಪದ ಇಬ್ಬರು ವ್ಯಕ್ತಿಗಳು ಜಗಳವಾಡುವ ಸಂದರ್ಭದಲ್ಲಿ 'ಜೋರು' ಎಂಬ ಅರ್ಥವನ್ನು ಪಡೆದುಕೊಳ್ಳುತ್ತದೆ.

**ಜಾಸ್ತಿ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ಅಧಿಕ, ಹೆಚ್ಚು, ಬಹಳ, ವಿರಳ, ಸಾಕಷ್ಟು ಮುಂತಾದ ಅರ್ಥಗಳನ್ನು ಹೊಂದಿದೆ. ಹಿಂದಿ, ಮರಾಠಿಯಲ್ಲಿ ಜಾಸ್ತೀ ಎಂದು ಬಳಕೆಯಾದರೆ, ಕನ್ನಡದಲ್ಲಿ ದೀರ್ಘಾಕ್ಷರವನ್ನು ಕಳೆದುಕೊಂಡು ಹೃಸ್ವಸ್ವರವಾಗಿ 'ಜಾಸ್ತಿ' ಎಂದು ಬಳಕೆಯಾಗಿದೆ.

ಪ್ರಯೋಗ – 'ಮೊದಲ ಪಿ.ಯು. ಪರೀಕ್ಷೆಯನ್ನು ಕಠಿಣ ಮಾಡಿದರೆ ಡ್ರಾಪ್‌ಔಟ್‌ಗಳ ಸಂಖ್ಯೆ ಜಾಸ್ತಿಯಾಗುತ್ತದೆ'. ಇಲ್ಲಿ ಹೆಚ್ಚು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಕ.ಪ್ರಭ, ಜೂ.೭)**

**ಡ್ರಾಪ್‌ಔಟ್**: (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು, ಬಿಟ್ಟು ಬಿಡು, ಅಂತರ, ಹೊರಗುಳಿ ಮುಂತಾದ ಅರ್ಥಗಳನ್ನು ಹೊಂದಿದೆ.

ಪ್ರಯೋಗ – 'ಮೊದಲ ಪಿ.ಯು.ಸಿ. ಪರೀಕ್ಷೆಯನ್ನು ಕಠಿಣ ಮಾಡಿದರೆ ಡ್ರಾಪ್‌ಔಟ್‌ಗಳ ಸಂಖ್ಯೆ ಖಂಡಿತ ಜಾಸ್ತಿ ಆಗುತ್ತದೆ'. **(ಕ.ಪ್ರಭ, ಜೂ.೭)**

**ತಮಾಷೆ** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು, ೧) ವಿನೋದದ ಪ್ರಸಂಗ, ಹಾಸ್ಯದ ಪ್ರಸಂಗ ೨) ಮೋಜಿನ ವಸ್ತು ೩) ನಗೆ, ಹಾಸ್ಯ ೪) ಶೃಂಗಾರದ ಅತಿರೇಕವುಳ್ಳ ಮಹಾರಾಷ್ಟ್ರದ ಒಂದು ಬಗೆಯ ಗ್ರಾಮೀಣ ರೂಪಕ ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿ – ತಮಾಶಾ, ಹಿಂದಿ, ಮರಾಠಿಯಲ್ಲಿ – ತಮಾಶಾ, ತಮಾಸಾ ಎಂದು ಬಳಕೆಯಾದರೆ, ಕನ್ನಡದಲ್ಲಿ ದೀರ್ಘಸ್ವರವನ್ನು ಕಳೆದುಕೊಂಡು 'ಎ' ಕಾರಂತ್ಯದೊಂದಿಗೆ ತಮಾಷೆ ಎಂದು ಬಳಕೆಯಾಗಿದೆ.

ಪ್ರಯೋಗ – 'ತಮಾಷೆ ಎಂದರೆ ಯಡಿಯೂರಪ್ಪ ಮುಖ್ಯಮಂತ್ರಿಯಾದಾಗಿನಿಂದಲೇ ಸಮಸ್ಯೆ ಎದುರಿಸಿದರು'. ಇಲ್ಲಿ ನಗೆಯ ವಸ್ತು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೨)**

**ತರಕಾರಿ** : (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ಕಾಯಿಪಲ್ಯ, ಅಡುಗೆಗಾಗಿ ಬಳಸುವ ಸಸ್ಯ, ಕಾಯಿ ಮೊದಲಾದವು ೨) ತರಕಾರಿಯನ್ನು ಬೇಯಿಸಿ ಮಾಡಿದ ಪಲ್ಯ. ಪಾರಸಿ, ಹಿಂದಿ, ಮರಾಠಿಯಲ್ಲಿ ತರಕಾರೀ ಎಂದು ಬಳಕೆಯಾದರೆ, ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು ಹೃಸ್ವಸ್ವರಾಬಿ 'ತರಕಾರಿ' ಎಂದು ಕನ್ನಡದಲ್ಲಿ ಬಳಕೆಯಾಗಿದೆ.

ಪ್ರಯೋಗ – 'ಮನೆ ಹಿತ್ತಲದಲ್ಲಿ ಜಾಗವಿದ್ದರೆ, ಹೂವಿನಗಿಡ, ಚಿಕ್ಕಮರ, ತರಕಾರಿ ಬೆಳೆದುಕೊಳ್ಳಬಹುದು'. **(ಕ.ಪ್ರಭ, ಜೂ.೫)**

**ತಾಕತ್ತು** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು, ೧) ಬಲ, ಶಕ್ತಿ, ಸಾಮರ್ಥ್ಯ ೨) ಧೈರ್ಯ ಎಂಬ ಅರ್ಥದಲ್ಲಿ ಬಳಕೆಯಾಗಿದೆ. ಅರೆಬ್ಬಿ, ಹಿಂದಿ, ತಾಕತ್, ಮರಾಠಿ, ತಾಕತ್ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ ಬಳಕೆಯಾಗಿದೆ.

ಪ್ರಯೋಗ – 'ಅವರ ಬರವಣಿಗೆಯಲ್ಲಿರುವ ತಾಕತ್ತು ಕನ್ನಡ ನಾಡಿಗೆ ತಿಳಿದಿದೆ'. ಇಲ್ಲಿ ಸಾಮರ್ಥ್ಯ ಎಂಬ ಅರ್ಥದಲ್ಲಿ ತಾಕತ್ತು ಎಂಬ ಪದಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೪)**

**ತಾಜಾ** : (ಗುಣಪದ) ಪಾರಸಿ ಮೂಲದಿಂದ ಬಂದಿದ್ದು. ೧) ಹೊಚ್ಚ ಹೊಸದಾದ, ಈಗ ತಾನೆ ಮಾಡಿದ ನಡೆದ ೨) ಸವಿಯಾದ, ರುಚಿಕರವಾದ ಎಂಬ ಅರ್ಥಗಳನ್ನು ಹೊಂದಿದೆ. ಪಾರಸಿ, ಹಿಂದಿ, ಮರಾಠಿಯಲ್ಲಿ ತಾಜಾ ಎಂದು, ಕನ್ನಡದಲ್ಲಿ ಯಥಾವತ್ತಾಗಿ ತಾಜಾ ಎಂದು ಬಳಕೆಯಾಗಿದೆ.

ಪ್ರಯೋಗ – 'ಇಂಥದ್ದೆ ಒಂದು ತಾಜಾ ಉದಾಹರಣೆ ವಿಧಾನಸಭಾ ಚುನಾವಣೆಯಲ್ಲಿ ಕರ್ನಾಟಕದಲ್ಲಿ ನಡೆದಿದೆ'. ಇಲ್ಲಿ ತಾಜಾ ಎಂಬ ಪದವು ಹೊಸ ಘಟನೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಸಂಯುಕ್ತ ಕರ್ನಾಟಕ, ಜೂ.೪**)

**ದರ್ಜೆ** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ೧) ವರ್ಗ, ಮಟ್ಟ ೨) ಅಂತಸ್ತು, ಪದವಿ, ಗೌರವ ೩) ತರಗತಿ, ಇಯತ್ತೆ ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿ – ದರ್ಜಾ, ದರಜಾ, ಹಿಂದಿ – ದರಜಾ, ಮರಾಠಿ – ದರ್ಜಾ, ಕನ್ನಡದಲ್ಲಿ ದೀರ್ಘ ಸ್ವರವನ್ನು ಕಳೆದುಕೊಂಡು 'ಎ' ಕಾರಂತವಾಗಿ ದರ್ಜೆ ಎಂದು ಬಳಕೆಯಾಗಿದೆ.

ಪ್ರಯೋಗ – 'ಕ್ಯಾಬಿನೆಟ್ ದರ್ಜೆಯ ಸಚಿವರನ್ನಾಗಿ ಬಿ.ಜೆ.ಪಿ. ಮಾಡಿತು'. (**ಸಂ. ಕರ್ನಾಟಕ, ಜೂ.೪**)

**ನಾಲಾ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ನೀರು ಹರಿಯುವುದಕ್ಕಾಗಿ ಮಾಡಿದ ತಗ್ಗು, ತೋಡು, ಕಾಲುವೆ ೨) ಬಂದೂಕಿನ ವಳಿಕೆ ಎಂಬ ಅರ್ಥಗಳನ್ನು ಹೊಂದಿದೆ. ಹಿಂದಿ, ಮರಾಠಿ – ನಾಲಾ ಎಂದು ಬಳಕೆಯಲ್ಲಿದ್ದರೆ, ಕನ್ನಡದಲ್ಲಿ ಯಥಾವತ್ತಾಗಿ ನಾಲಾ, ನಾಲೆ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ನಾಲಾ ದುರಂತಕ್ಕೆ ಒಳಗಾದ ತುಮಕೂರಿನ ೭ ಜನಕ್ಕೆ ಇಂಜನಿಯರ್ ಕಾಂಟ್ರೀಕ್ಟರಗಳಿಂದ ಪರಿಹಾರ ದೊರಕುವಂತಾಯಿತು'. ಇಲ್ಲಿ ನೀರು ಹರಿಯುವ ಕಾಲುವೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಕ.ಪ್ರಭ, ಜೂ.೬**)

**ಫಜೀತಿ** : (ನಾಮಪದ) ಅರೆಬ್ಬಿ ಮೂಲದಿಂದ ಬಂದಿದ್ದು, ತೊಂದರೆ, ಇಕ್ಕಟ್ಟು ಎಂಬ ಅರ್ಥಗಳನ್ನು ಹೊಂದಿದೆ. ಮರಾಠಿಯಲ್ಲಿ ಫಜೀತೀ ಎಂದು ಅರೆಬ್ಬಿ ಮತ್ತು ಹಿಂದಿಯಲ್ಲಿ ಫಜೀಹತ್ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜ್ಯನಾಂತ್ಯವನ್ನು ಮತ್ತು ದೀರ್ಘಸ್ವರವನ್ನು ಕಳೆದುಕೊಂಡು 'ಫಜೀತಿ' ಎಂದು ಬಳಕೆಯಾಗಿದೆ.

ಪ್ರಯೋಗ – 'ನಮ್ಮ ಈ ಫಜೀತಿಯನ್ನು ಕುರಿಕಾಯಲು ಬಂದಿದ್ದ

ದೂರದ ದಡದ ಮೇಲೆ ಕುಳಿತು ಕೊಡೆ ಹಿಡಿದು ಕುಳಿತಿದ್ದ ಹಳ್ಳಿಯವರು ನೋಡಿದರು'. ಇಲ್ಲಿ ತೊಂದರೆ ಎಂಬ ಅರ್ಥದಲ್ಲಿ ಬಳಕೆಯಾಗಿದೆ. **(ಪ್ರಜಾವಾಣಿ, ಜೂ.೬)**

ಹುದ್ದೆ, ಕಿಮ್ಮತ್ತು, ಕಛೇರಿ, ದುಬಾರಿ ಮುಂತಾದ ಅನ್ಯಭಾಷಾ ಪದಗಳು ಬಳಕೆಯಾಗಿವೆ. ಈ ಪದಗಳನ್ನು ಈಗಾಗಲೇ ಚರ್ಚಿಸಲಾಗಿದೆ. **(ಪ್ರಜಾವಾಣಿ, ಜೂ.೨)**

**ಬಚಾವು** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು, ಉಳಿಯುವಿಕೆ, ಪಾರಾಗುವಿಕೆ, ರಕ್ಷಣೆ ಎಂಬ ಅರ್ಥಗಳಲ್ಲಿ ಬಳಕೆಯಾಗಿದೆ. ಹಿಂದಿ, ಮರಾಠಿಯಲ್ಲಿ ಬಚಾವ್ ಎಂದು, ಕನ್ನಡದಲಲಿ ವ್ಯಂಜ್ಯನಾಂತ್ಯ ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ 'ಬಚಾವು' ಎಂದು ಬಳಕೆಯಾಗಿದೆ.
ಪ್ರಯೋಗ – 'ಭಯೋತ್ಪಾದನೆಗೆ ಕುಮ್ಮಕ್ಕು ನೀಡುವ ರಾಜಕೀಯ ನಿಲ್ಲಿಸದಿದ್ದರೆ ಅಧೋಗತಿ'. ಇಲ್ಲಿ ಕುಮ್ಮಕ್ಕು ಎಂಬ ಪದವು ಸಹಾಯ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ವಿ.ಕರ್ನಾಟಕ, ಜೂ.೨)**

**ಬಾಬ್ತು** : (ನಾಮಪದ) ಅರೇಬ್ಬಿಕ್ ಮೂಲದಿಂದ ಬಂದಿದ್ದು. ೧) ವಿಷಯ, ಸಂಗತಿ ೨) ವಸ್ತು, ಪದಾರ್ಥ ೩) ವಿಭಾಗ, ಬಾಬತ್ತು ೪) ಸುಂಕ, ತೆರಿಗೆ ೫) ಕ್ರಮ, ವಾಡಿಕೆ ೬) ರೂಢಿಯಾಗಿ ಕೊಡುವ ಪದಾರ್ಥ, ಮಾಮೂಲು ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿ, ಹಿಂದಿ, ಮರಾಠಿಯಲ್ಲಿ ಬಾಬ್ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜನವನ್ನು ಕಳೆದುಕೊಂಡು 'ಉ' ಕಾರಾಂತ್ಯವಾಗಿ 'ಬಾಬು' ಎಂದು ಬಳಕೆಯಲ್ಲಿದೆ.
ಪ್ರಯೋಗ – 'ಇತರೆ ಬಾಬುಗಳಿಂದ ತೆರಿಗೆ ಸಂಗ್ರಹಿಸಿ, ವೃದ್ಧಿಸಿ ರಾಜ್ಯ ಬೊಕ್ಕಸದ ಆದಾಯವನ್ನು ೩೫ ಸಾವಿರ ಕೋಟಿಗೆ ಏರಿಸಿದರು'. **(ಕ.ಪ್ರಭ, ಜೂ.೩)**

**ಬೇಜಾನ್** : (ಗುಣಪದ) ಹಿಂದಿ ಮೂಲದಿಂದ ಬಂದಿದ್ದು. ೧)ಹೆಚ್ಚು, ಬಹಳ, ಬೇಕಾದಷ್ಟು, ಅಧಿಕಸಂಖ್ಯೆ, ಸಾಕಷ್ಟು ಎಂಬ ಅರ್ಥಗಳನ್ನು ಹೊಂದಿದೆ. ಹಿಂದಿ, ಮರಾಠಿಯಲ್ಲಿ ಬೇಜಾನ್ ಎಂದು ಬಳಕೆಯಾಗಿದೆ. ಕನ್ನಡದಲ್ಲೂ ಕೂಡ ಯಥಾವತ್ತಾಗಿ ಬಳಕೆಯಾಗಿದೆ.
ಪ್ರಯೋಗ – 'ಸ್ವಪ್ರತಿಷ್ಠೆಯನ್ನು ಗಳಿಸುವ ಮುಖಂಡರೇನೋ ಬೇಜಾನ್ ಸಿಗುತ್ತಾರೆ'. ಇಲ್ಲಿ ಬೇಕಾದಷ್ಟು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೩)**

ಭರ್ಜರಿ : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ೧) ಅದ್ದೂರಿ, ಜೋರು, ಆಡಂಬರ (ಗುಣಪದ) ೨) ಸಂಪೂರ್ಣವಾಗಿ, ಜರಿಯಿಂದ ಕೂಡಿದ ೩) ಶ್ರೇಷ್ಠವಾದ, ಭಾರಿ ಎಂಬ ಅರ್ಥಗಳನ್ನು ಹೊಂದಿದೆ. ಮರಾಠಿ – ಭರ್ಜರೀ, ಕನ್ನಡದಲ್ಲಿ – ಭರ್ಜರಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಹೈ.ಕ. ಜಿಲ್ಲೆಗಳಲ್ಲಿ ಕಮಲವು ಭರ್ಜರಿ ಕಮಾಲ್ ಮಾಡಿದೆ'. ಇಲ್ಲಿ ಭರ್ಜರಿ ಎಂಬ ಪದವು ಜೋರು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂ.ಕರ್ನಾಟಕ, ಜೂ.೧)**

ಮುತುವರ್ಜಿ: (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದೆ. ೧) ಆಸಕ್ತಿ, ಶ್ರದ್ಧೆ ೨) ಎಚ್ಚರಿಕೆ, ಗಮನ, ಕಾಳಜಿ ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿ, ಹಿಂದಿ – ಮುತ್‌ವಜ್ಜಹ್ ಎಂದು ಬಳಕೆಯಾದರೆ ಕನ್ನಡದಲ್ಲಿ ಮುತುವರ್ಜಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಬಿ.ಜೆ.ಪಿ. ಈಗ ಭರವಸೆ ಈಡೇರಿಸುವಲ್ಲಿ ಮುತುವರ್ಜಿ ವಹಿಸಬೇಕಾಗಿದೆ'. ಇಲ್ಲಿ ಮುತುವರ್ಜಿ ಎಂಬ ಪದವು ಕಾಳಜಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂ.ಕರ್ನಾಟಕ, ಜೂ.೧)**

ಮುಲಾಜು: (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ೧) ದಾಕ್ಷಿಣ್ಯ, ಸಂಕೋಚ ೨) ಹಂಗು, ಋಣ ಮುಂತಾದ ಅರ್ಥಗಳನ್ನು ಹೊಂದಿದೆ.

ಅರೆಬ್ಬಿಯಲ್ಲಿ ಮುಲಾಹಹರ್ಝೂ, ಹಿಂದಿಯಲ್ಲಿ ಮುಲಾಜ್, ಮರಾಠಿ – ಮುಲಾಜ್, ಮುಲಾಇಜಾ, ಮುಲಾಹಿಜಾ ಎಂದು ಬಳಕೆಯಾದರೆ, ಕನ್ನಡದಲ್ಲಿ ಮುಲಾಜಿ, ಮುಲಾಜು ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಇಲ್ಲದಿದ್ದರೆ ಜನ ಯಾವ ಮುಲಾಜಿ ಇಲ್ಲದೇ ಅಧಿಕಾರದಿಂದ ಕಿತ್ತೆಸೆಯುವವರು'. ಇಲ್ಲಿ 'ಹಂಗು' ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ.

ಯಾದಿ : (ನಾಮಪದ) ಮರಾಠಿ ಮೂಲದಿಂದ ಬಂದಿದೆ. ನೆನಪಿಗಾಗಿ ಬರೆದಿಟ್ಟುಕೊಂಡ ವಸ್ತುಗಳು, ವ್ಯಕ್ತಿಗಳು ಮೊದಲಾದವುಗಳ ಪಟ್ಟಿ ಎಂಬ ಅರ್ಥಗಳನ್ನು ಹೊಂದಿದೆ. ಮರಾಠಿಯಲ್ಲಿ ಯಾದೀ ಎಂದು ಬಳಕೆಯಾದರೆ, ಕನ್ನಡದಲ್ಲಿ ದೀರ್ಘಸ್ವರವನ್ನು ಕಳೆದುಕೊಂಡು 'ಯಾದಿ' ಎಂದು ಬಳಕೆಯಾಗಿದೆ.

ಪ್ರಯೋಗ – 'ಮೊದಲನೆಯದಾಗಿ ಚುನಾವಣೆಗಿಂತ ಮುಂಚಿತವಾಗಿ ಮತದಾರರ ಯಾದಿ ಪರಿಷ್ಕರಿಸಲಾಗಿತ್ತು'. ಇಲ್ಲಿ ವ್ಯಕ್ತಿಗಳ ಪಟ್ಟಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂ.ಕರ್ನಾಟಕ, ಜೂ.೬)**

ಲಾಟರಿ : (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಹಣ ಕೊಟ್ಟು ಪಡಿದ ಟಿಕೇಟು, ಚೀಟಿಗಳ ಮೂಲಕ ಕೆಲವರಿಗೆ ಕೇವಲ ಅದೃಷ್ಟದಿಂದ ಬಹುಮಾನ

ದೊರೆಯುವಂತೆ ಏರ್ಪಡಿಸಿದ ಆಯ್ಕೆ, ಅದೃಷ್ಟ ಪರೀಕ್ಷೆ ಎಂಬ ಅರ್ಥಗಳನ್ನು ಹೊಂದಿದೆ.

ಪ್ರಯೋಗ – 'ಮದ್ಯ, ಕುದುರೆ, ಜೂಜು, ಲಾಟರಿ, ಎಲ್ಲದಕ್ಕೂ ನಿಷೇಧವಿರುವ ಗುಜರಾತ್‌ನಲ್ಲಿ ಆಕ್ಟ್ರಾಯ್ ಕೂಡ ರದ್ದಾಗಿದೆ'. **(ವಿ. ಕರ್ನಾಟಕ, ಜೂ.೭)**

**ವತನ್** : (ನಾಮಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು, ೧)ವಂಶಪಾರಂಪರೆಯಾಗಿ ಬಂದ ಆಸ್ತಿ–ಭೂಮಿ ಹಿರಿಯರಿಂದ ಬಂದ ಸ್ವತ್ತು ೨) ಇನಾಮಾಗಿ ಪಡೆದ ಭೂಮಿ, ಇನಾಮು ಭೂಮಿ, ಜಾಹಗೀರು, ಜಾಗೀರು ೩) ವಂಶ ಪಾರಂಪರಾಗತವಾದ ಉದ್ಯೋಗದಿಂದ ಬರುವ ಆದಾಯ, ಗಳಿಕೆ, ಉತ್ಪನ್ನ ೪) ವಂಶ ಪಾರಂಪರ್ಯವಾಗಿ ಬಂದ ಉದ್ಯೋಗ, ಕಸುಬು ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿ, ಹಿಂದಿ, ಮರಾಠಿ – ವತನ್ ಎಂದು, ಪ್ರಾಕೃತ – ವತ್ತಣ, ಸಂಸ್ಕೃತ – ವರ್ತನ ಎಂದು ಬಳಕೆಯಾದರೆ ಕನ್ನಡದಲ್ಲಿ ವತನ್ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ವತನ್ ಎಂಬ ಶಬ್ದ ಮಹತ್ತರ ಶಕ್ತಿಯನ್ನು ಪಡೆದಿದೆ'. ಇಲ್ಲಿ ವತನ್ ಎಂಬುದು ವಂಶ ಪಾರಂಪರ್ಯವಾದ ಉದ್ಯೋಗ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೪)**

**ಶಿಸ್ತು** : (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ೧) ಅಲಂಕಾರ, ಶೃಂಗಾರ, ಸೊಗಸು ೨) ಕಟ್ಟುಪಾಡು, ಕಟ್ಟಳೆ, ನಿಯಮ, ವಿಧಿ ೩) ಒಪ್ಪಓರಣ, ಕ್ರಮ ೪) ಗುರಿ, ಲಕ್ಷ್ಯ ೫) ಕಂದಾಯ, ತೆರಿಗೆ ೬) ಕಂದಾಯಬಾಕಿ, ನಿಂತಕುಳಗಳ ದಾಖಲೆಯ ಪುಸ್ತಕ, ಕಟ್ಟು ಮುಂತಾದ ಅರ್ಥಗಳನ್ನು ಹೊಂದಿದೆ.

ಪಾರಸಿ, ಮರಾಠಿಯಲ್ಲಿ ಶಿಸ್ತ್ ಎಂದು, ಕನ್ನಡದಲ್ಲಿ ವ್ಯಂಜ್ಯನಾಂತ್ಯ ಕಳೆದುಕೊಂಡು 'ಉ' ಕಾರಂತ್ಯವಾಗಿ ಸಿಸ್ತು, ಶಿಸ್ತು ಎಂದು ಬಳಕೆಯಲ್ಲಿದೆ.

ಪ್ರಯೋಗ – 'ಬಿ.ಜೆ.ಪಿ. ತತ್ವ ಸಿದ್ಧಾಂತಗಳಿಂದ ಶಿಸ್ತನ್ನು ಮೈಗೂಡಿಸಿಕೊಂಡು ಅಧಿಕಾರದ ಗದ್ದುಗೆಯನ್ನು ಆವರಿಸಿಕೊಂಡಿದೆ. ಇಲ್ಲಿ ನಿಯಮ, ಕಟ್ಟಳೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂ.ಕರ್ನಾಟಕ, ಜೂ.೬)**

**ಸಿಂಧಿ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ೧) ಕಾಡು ಈಚಲಮರ, ಮದ್ಯವನ್ನು ತೆಗೆಯುವ ಈಚಲುಮರ ೨) ಈಚಲುಮದ್ಯ, ಸರೆ, ಹೆಂಡ ಮುಂತಾದ ಅರ್ಥಗಳನ್ನು ಹೊಂದಿದೆ.

ಮರಾಠಿ – ಶಿಂದೀ ಎಂದು, ಹಿಂದಿ – ಸೇಂದಿ, ಕನ್ನಡದಲ್ಲಿ – ಸಿಂದಿ, ಸೇಂದಿ, ಶಿಂದಿ ಎಂದು ಬಳಕೆಯಲ್ಲಿದೆ.

ಪ್ರಯೋಗ – ' ಸರಾಯಿ, ಸಿಂದ ಹಾಗೂ ಹಣದ ಹೊಳೆಗೆ ಕಡಿವಾಣ ಹಾಕಲಾಯಿತು'. **(ಸಂ.ಕರ್ನಾಟಕ, ಜೂ.೬)**

**ಸ್ಯಾಂಪಲ್:** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು, ಗುರುತು, ವಸ್ತುವಿನ ಸ್ವಲ್ಪಭಾಗ ಪರೀಕ್ಷೆಗಾಗಿ, ವೀಕ್ಷಣೆಗಾಗಿ ತರುವ ಸ್ವಲ್ಪ ಭಾಗ ಎಂಬ ಅರ್ಥಗಳನ್ನು ಕೊಡುತ್ತದೆ.

ಪ್ರಯೋಗ – 'ರಾಜ್ಯದ ಜನರು ಒಮ್ಮೆ ಬಿ.ಜೆ.ಪಿ. ಗೆ ನೀಡಿರುವ ಅಧಿಕಾರ ಸ್ಯಾಂಪಲ್ ನೋಡಲು ಕೊಟ್ಟ ಅಧಿಕಾರ'. ಇಲ್ಲಿ ಪರೀಕ್ಷಿಸುವುದಕ್ಕಾಗಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೨)**

ಒಟ್ಟಾರೆಯಾಗಿ ಕನ್ನಡ ದಿನಪತ್ರಿಕೆಗಳ ಓದುಗರ ಕಾಲಂ (ವಾಚಕರ ವಾಣಿ) ನಲ್ಲಿ ಬಳಕೆಯಾಗುವ ಅನ್ಯಭಾಷಾ ಬಳಕೆಯನ್ನು ನೋಡುವುದಾದರೆ, ಪ್ರಜಾವಾಣಿಯಲ್ಲಿ ಪರ್ಷೊ ಅರೆಬ್ಬಿಕ್ ಪದಗಳು ಹೆಚ್ಚಾಗಿ ಬಳಕೆಯಾಗಿದ್ದು, ಹಿಂದಿ, ಪಾರಸಿ ಪದಗಳು ಕಡಿಮೆ ಪ್ರಮಾಣದಲ್ಲಿ ಬಳಕೆಯಾಗಿವೆ. ಮರಾಠಿ ಪದಗಳ ಬಳಕೆ ಇನ್ನೂ ಕಡಿಮೆ. ಇಂಗ್ಲೀಷ್ ಪದಗಳ ಬಳಕೆ ಶೇ.೨೪ ರಷ್ಟು ಕಂಡು ಬಂದರೆ, ವಿಜಯ ಕರ್ನಾಟಕದಲ್ಲಿ ಅರೆಬ್ಬಿಕ್ ಪದಗಳು ಹೆಚ್ಚಾಗಿ ಕಂಡು ಬಂದಿದ್ದು, ಪಾರಸಿ, ಹಿಂದಿ ಪದಗಳ ಬಳಕೆ ಕಡಿಮೆ. ಆದರೆ ಇಂಗ್ಲೀಷ್ ಪದಗಳು ಶೇ.೪೦ ರಷ್ಟು ಬಳಕೆಯಾಗಿರುವುದು ಕಂಡು ಬಂದಿದೆ. ಅದೇ ರೀತಿಯಾಗಿ ಕನ್ನಡಪ್ರಭದಲ್ಲಿ ಪಾರಸಿ, ಹಿಂದಿ ಪದಗಳು ಹೆಚ್ಚಾಗಿ ಬಳಕೆಯಾಗಿದ್ದು, ಅರೆಬ್ಬಿಕ್, ಮರಾಠಿ ಪದಗಳ ಬಳಕೆ ಕಡಿಮೆ. ಇಂಗ್ಲೀಷ್ ಪದಗಳು ಶೇ. ೪೦ ರಷ್ಟು ಬಳಕೆಯಾದದ್ದು ಕಂಡು ಬಂದಿದೆ.

### ೩.೫. ವ್ಯಂಗ್ಯಚಿತ್ರಗಳಲ್ಲಿ (ಕಾರ್ಟೂನ್) ಅನ್ಯಭಾಷಾ ಬಳಕೆ

ಭಾಷೆ ಮೌಖಿಕವೇ ಆಗಿರಲಿ ಅಥವಾ ಲಿಖಿತವೇ ಆಗಿರಲಿ ಅದರ ಪ್ರಮುಖ ಉದ್ದೇಶ ಸಂವಹನ ಕ್ರಿಯೆಯನ್ನುಂಟು ಮಾಡುವುದು. ಇಂತಹ ಸಂವಹನ ಕ್ರಿಯೆಯನ್ನುಂಟು ಮಾಡುವ ಸಾಧನಗಳಲ್ಲಿ ಪತ್ರಿಕೆಯೂ ಒಂದು. ಪತ್ರಿಕೆಗಳಲ್ಲಿ ಬಳಕೆಯಾಗುವ ಅಥವಾ ಮೂಡಿ ಬರುವ ವ್ಯಂಗ್ಯಚಿತ್ರಗಳೂ ಕೂಡ ಒಂದು ರೀತಿಯ ಸಂವಹನ ಕ್ರಿಯೆಯನ್ನುಂಟು ಮಾಡುತ್ತವೆ. ವ್ಯಂಗ್ಯಚಿತ್ರಗಳು ಸಾಮಾನ್ಯವಾಗಿ ಸಾಮಾಜಿಕ, ರಾಜಕೀಯ, ಆರ್ಥಿಕ ಮುಂತಾದ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಜಗತ್ತಿನ ಸಂಗತಿಗಳನ್ನು ನಮ್ಮ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತವೆ. ಜಾಗತಿಕ ಘಟನೆಗಳನ್ನು ವ್ಯಂಗ್ಯಚಿತ್ರಗಳ ಮೂಲಕ ಮಾತ್ರ ತಿಳಿದುಕೊಳ್ಳಲು ಸಾಧ್ಯವೆ? ರೇಡಿಯೋ, ಟಿ.ವಿ. ಮುಂತಾದವುಗಳ ಮೂಲಕ ತಿಳಿದುಕೊಳ್ಳಲು ಸಾಧ್ಯವಿಲ್ಲವೆ? ಎಂಬ ಪ್ರಶ್ನೆಗಳು ಉದ್ಭವಿಸುವುದು ಸಹಜ. ಆದರೆ ಮುದ್ರಣ ಮಾಧ್ಯಮವಾದ ಪತ್ರಿಕೆಗಳಲ್ಲಿ ಮೂಡಿಬಂದ ವ್ಯಂಗ್ಯಚಿತ್ರವು ಓದುಗರಿಗೆ ತಲುಪಿಸುವ ಸಂದೇಶವನ್ನು ಮತ್ತೆ-ಮತ್ತೆ

ಗ್ರಹಿಸಲು ಅವಕಾಶವಿರುತ್ತದೆ ಎಂಬುದನ್ನು ಒಪ್ಪಬಹುದಾಗಿದೆ.

ವ್ಯಂಗ್ಯಚಿತ್ರಗಳು ಹಿರಿದಾದ ಸಂಗತಿ ಅಥವಾ ವಿಷಯವನ್ನು ಅತ್ಯಂತ ಕಿರಿದಾಗಿ ಹಸಿಗೋಡೆಯ ಮೇಲೆ ಹರಳನ್ನು ನೆಟ್ಟಂತೆ ಅತ್ಯಂತ ಅರ್ಥಗರ್ಭಿತವಾಗಿ ಓದುಗರಿಗೆ ಸಂದೇಶವನ್ನು ನೀಡುತ್ತವೆ. ಕೆಲವೊಂದು ಬಾರಿ ಚಾಟಿ ಏಟಿನಂತೆ ಚುರುಕನ್ನು ಮುಟ್ಟಿಸುತ್ತವೆ. ಕೆಲವೊಂದು ಘಟನೆಗಳನ್ನು ವಿಡಂಭನಾತ್ಮಕವಾಗಿ ಬಿಂಬಿಸುವುದರ ಮೂಲಕ ಓದುಗರಿಗೆ ಮನೋರಂಜನೆಯನ್ನು ನೀಡುತ್ತವೆ. ಉದಾಹರಣೆಗಾಗಿ ದಿನಾಂಕ : ೦೬-೦೪-೨೦೦೮ ರ ವಿಜಯ ಕರ್ನಾಟಕ ಪತ್ರಿಕೆಯಲ್ಲಿ ಒಂದು ವಿಧಾನಸೌಧದ ಚಿತ್ರ ಅದರ ಒಳಗಡೆ ಉರಿಯುತ್ತಿರುವ ಬೆಂಕಿಯ ಚಿತ್ರ. ಹೊರಗಡೆ ಒಬ್ಬ ವ್ಯಕ್ತಿ (ಪ್ರಜೆ) ತನ್ನ ಬಾಯಿಯ ಮೇಲೆ ಕೈಯಿಟ್ಟುಕೊಂಡು ಇದು ಅಗ್ನಿ ಅನಾಹುತ ಅಲ್ಲ ಸಚಿವರ ಕಛೇರಿಗಳಲ್ಲಿ ಹೋಮ, ಹವನ ಇತ್ಯಾದಿ ಕಾರ್ಯಕ್ರಮಗಳು ನಡೆಯುತ್ತವೆ ಎಂದು ಹೇಳುವುದು ಯಡಿಯೂರಪ್ಪನವರು ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದ ನಂತರ ಅವರು ಕೈಗೊಂಡ ಹೋಮ, ಹವನ ಕಾರ್ಯಕ್ರಮಗಳು ಬುದ್ಧಿವಂತ ಪ್ರಜೆಗಳಿಗೆ ಒಂದೆಡೆ ಮುಜುಗರವನ್ನು ತಂದರೆ ಮತ್ತೊಂದೆಡೆ ನಗೆಗೆ ಈಡು ಮಾಡುತ್ತವೆ. ಜೊತೆಗೆ ಆ ಸಂದರ್ಭದ ಸಮಗ್ರ ರಾಜಕೀಯ ಸ್ಥಿತಿಗತಿಯನ್ನು ವಿವರಿಸುತ್ತವೆ.

ವ್ಯಂಗ್ಯಚಿತ್ರಗಳಿಗೂ ಒಂದು ತನ್ನದೇಯಾದ ಭಾಷೆ ಇದ್ದು ಆ ಭಾಷೆ ಅತ್ಯಂತ ಹರಿತವಾಗಿದ್ದು, ಓದುಗರನ್ನು ಆಲೋಚನೆ ಮಾಡಲು ಹಚ್ಚುತ್ತದೆ. ಚಿತ್ರಗಳ ಜೊತೆಗೆ ಬಳಸಲ್ಪಡುವ ಪದಗಳು ಅರ್ಥಗರ್ಭಿತವಾಗಿದ್ದು, ವ್ಯಂಗ್ಯಚಿತ್ರಗಳು ಓದುಗರಿಗೆ ತಲುಪಿಸುವ ಸಂದೇಶವನ್ನು ವಿವಿಧ ಮಜಲುಗಳಿಂದ ಅರ್ಥ ಪಡಿಸುತ್ತವೆ. ವ್ಯಂಗ್ಯಚಿತ್ರಕಾರನು ತಾನು ಕಂಡುಕೊಂಡ ಅನಿಸಿಕೆ, ಅಭಿಪ್ರಾಯಗಳನ್ನು ಪತ್ರಿಕೆಗಳಲ್ಲಿ ಲಿಖಿತ ವರದಿಗಳ ಜೊತೆಗೆ ಹಾಗೂ ವ್ಯಂಗ್ಯಚಿತ್ರಗಳ ಮೂಲಕ ಹೊರ ಹಾಕುತ್ತಾನೆ. ಅಷ್ಟೇ ಮಾರ್ಮಿಕವಾಗಿ ಆ ಚಿತ್ರಗಳು ಓದುಗರನ್ನು ಆಕರ್ಷಿಸುತ್ತವೆ. ಕೆಲವು ಓದುಗರ ಪತ್ರಿಕೆಯನ್ನು ಕೈಯಲ್ಲಿ ಹಿಡಿದ ತಕ್ಷಣವೇ ವ್ಯಂಗ್ಯಚಿತ್ರಗಳ ಕಡೆಗೆ ಕಣ್ಣಾಡಿಸುವುದು ಸಾಮಾನ್ಯ ಎನಿಸುತ್ತದೆ. ತಿಂಗಳುಗಟ್ಟಲೆ ನಡೆದಿರುವ ಒಂದು ಸಂಗತಿಯನ್ನು ಕೇವಲ ಒಂದು ಅಥವಾ ಎರಡು ಚಿತ್ರಗಳು ತಿಳಿಸುವುದರ ಮೂಲಕ ಕ್ಷಣಾರ್ಧದಲ್ಲಿ ಓದುಗರನ್ನು ಆಕರ್ಷಿಸುತ್ತವೆ.

ಉದಾಹರಣೆಗೆ ದಿನಾಂಕ : ೦೩-೫-೨೦೦೮ ಮೇ ತಿಂಗಳಿನ ಪ್ರಜಾವಾಣಿಯಲ್ಲಿ ಚುನಾವಣೆಗಿಂತ ಮುಂಚೆ ಓಟು ಕೊಡಿ ಎಂದು ರಾಜಕಾರಣಿಯೊಬ್ಬನು ಅಳುವ ಚಿತ್ರ. ಆ ಚಿತ್ರದ ಕೆಳಗೆ ಓಟು ಕೊಟ್ಟ ನಂತರ ಮತದಾರನು ಜೋರಾಗಿ ಅಳುವ ಚಿತ್ರ. ಈ ಎರಡು ಚಿತ್ರಗಳು ಚುನಾವಣೆಯಲ್ಲಿ ರಾಜಕಾರಣಿಗಳು ಓಟು ಪಡೆದುಕೊಳ್ಳುವ ರೀತಿಯನ್ನು ಓಟು ಕೊಟ್ಟ ನಂತರ ೫ ವರ್ಷದವರೆಗೆ ಮತದಾರನು ಗೋಳಿಡುವ ಸಂಗತಿಯನ್ನು ಚಿತ್ರಿಸುತ್ತದೆ. ಆದರೆ ಈ ಘಟನೆ ಎರಡರಿಂದ ಮೂರು ತಿಂಗಳು ನಡೆಯುವ ಸಂಗತಿ ಎಂಬುದನ್ನು ಮರೆಯುವಂತಿಲ್ಲ.

ವ್ಯಂಗ್ಯಚಿತ್ರಗಳು ಗಾತ್ರದಲ್ಲಿ ಚಿಕ್ಕದಾಗಿದ್ದರೂ, ಸಾಮಾಜಿಕ ಸ್ಥಿತಿಗತಿ, ವ್ಯಕ್ತಿಗಳ ಹಾವಭಾವಗಳು, ವಸ್ತುಗಳು, ಆ ವಸ್ತುಗಳು ದಾಖಲಾಗುವ ರೀತಿ, ರಾಜಕೀಯ ತಂತ್ರಗಾರಿಕೆ, ಅಧಿಕಾರ ಪಡೆಯಲು ವಿವಿಧ ಪಕ್ಷಗಳು ಮಾಡುವ ಕಸರತ್ತು ಮುಂತಾದವುಗಳ ವ್ಯಂಗ್ಯಚಿತ್ರಗಳ ವಸ್ತುಗಳಾಗಿವೆ. ವ್ಯಂಗ್ಯಚಿತ್ರ ಸಣ್ಣದಾದರೂ ಅದು ನೀಡುವ ಸಂದೇಶ ಸಣ್ಣದೊಂದು ಭಾವಿಸುವಂತಿಲ್ಲ. ಘಟನೆಗೆ ಸಂಬಂಧಿಸಿದ ವಿಷಯ ಸ್ವಲ್ಪ ಮಟ್ಟಿಗಾದರೂ ಮುಂಚಿತವಾಗಿ ಗೊತ್ತಿದ್ದರೆ, ಕೂರ್ಟೂನ್‌ನ್ನು ನೋಡಿದ ತಕ್ಷಣವೇ ಸಂಪೂರ್ಣವಾಗಿ ಅರ್ಥವಾಗದಿದ್ದರೂ, ಸ್ವಲ್ಪ ಮಟ್ಟಿಗಾದರೂ ಅರ್ಥ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ವ್ಯಂಗ್ಯಚಿತ್ರಗಳ ಮತ್ತೊಂದು ವೈಶಿಷ್ಟ್ಯತೆ ಎಂದರೆ ಹಿರಿದಾದ ಸಂಗತಿಯನ್ನು ಅತ್ಯಂತ ಸಂಕ್ಷಿಪ್ತವಾಗಿ ಹೇಳುತ್ತವೆ. "ಕಾರ್ಟೂನ್‌ಗಳಿಗೆ ಸ್ವತಂತ್ರ ಅಸ್ತಿತ್ವ ಇದೆ. ಇವು ಸ್ವತಂತ್ರವಾಗಿ ಕೂಡ ಅರ್ಥವಾಗಬಲ್ಲವು. ಕಾರ್ಟೂನ್‌ಗಳನ್ನು ಬರೆದ ಸಂದರ್ಭ ಗೊತ್ತಿದ್ದರೆ ಅವುಗಳ ಅರ್ಥವಿಸ್ತಾರ ಇನ್ನೂ ಹೆಚ್ಚಾಗುತ್ತದೆ. ಹಾಗಾಗಿ ಕಾರ್ಟೂನುಗಳು ಬೀದಿ ನಾಟಕಗಳಿದ್ದಂತೆ ಆಯಾ ಕಾಲಕ್ಕೆ ತಕ್ಷಣ ರಿಯಾಕ್ಟ್ ಮಾಡಿ ಕಣ್ಮರೆಯಾಗುತ್ತವೆ. ಯಾರು ವ್ಯಂಗ್ಯಚಿತ್ರಗಳನ್ನು ಮತ್ತೆ-ಮತ್ತೆ ಸಂಗ್ರಹಿಸಿ ನೋಡುವುದಿಲ್ಲ. ದೊಡ್ಡ ಲೇಖನ ಅಥವಾ ದೊಡ್ಡ ಬರವಣಿಗೆ ಮಾಡುವ ಕೆಲಸವನ್ನು ಒಂದು ಅರ್ಥಗರ್ಭಿತವಾದ ಕಾರ್ಟೂನುಗಳು ಮಾಡುತ್ತವೆ. ಆದರೂ ಅದರ ಆಯಸ್ಸು ತುಂಬ ಕಡಿಮೆ ಎಂದು ಹೇಳಬಹುದು"[೧].

"ಕಾರ್ಟೂನುಗಳಿಗೆ ತನ್ನದೇಯಾದ ಓದುವ ವರ್ಗವಿದ್ದಂತೆ ಆ ಕಾರ್ಟೂನ್‌ಗಳಿಗೆ ಒಂದು ಪರಿಭಾಷೆಯೂ ಇದೆ. ಒಬ್ಬ ವ್ಯಂಗ್ಯಚಿತ್ರಕಾರನು ತನ್ನ ಅನಿಸಿಕೆಗಳನ್ನು ಚಿತ್ರ, ಸಂಗೀತ, ಬರವಣಿಗೆಯ ಮೂಲಕ ಹೊರಹಾಕುವಂತೆ ವ್ಯಂಗ್ಯ ಚಿತ್ರಗಳ ಮೂಲಕ ಹೊರ ಹಾಕುತ್ತಾನೆ"[೨].

ಪತ್ರಿಕೆಗಳಲ್ಲಿ ಮೂಡಿ ಬರುವ ವ್ಯಂಗ್ಯಚಿತ್ರಗಳಲ್ಲಿ ಬಳಕೆಯಾಗುವ ಅನ್ಯಭಾಷಾ ಪದಗಳನ್ನು ಗಮನಿಸುವುದಾದರೆ, ರಾಜ್ಯ ಮಟ್ಟದ ಪತ್ರಿಕೆಗಳಲ್ಲಿ ಸಂಸ್ಕೃತ ಮತ್ತು ಇಂಗ್ಲೀಷ್ ಪದಗಳು ಹೆಚ್ಚು ಬಳಕೆಯಾಗುತ್ತಿದ್ದು, ಹಿಂದಿ, ಮರಾಠಿ ಪದಗಳ ಬಳಕೆ ಕಡಿಮೆ ಎಂದು ಹೇಳಬಹುದು. ಇನ್ನೂ ಕೆಲವೊಂದು ಬಾರಿ ಓದುಗರನ್ನು ಆಕರ್ಷಿಸುವುದಕ್ಕಾಗಿ ಕನ್ನಡದ ಪ್ರಾದೇಶಿಕ ಪದಗಳು ಬಳಕೆಯಾಗುತ್ತವೆ. ಆದರೆ ಬಹುತೇಕ ಕಾರ್ಟೂನುಗಳಲ್ಲಿ ಇಂಗ್ಲೀಷ್ ಭಾಷೆಯ ಪದಗಳು ಹೆಚ್ಚು ಬಳಕೆಯಾಗುತ್ತಿದ್ದು, ಇಂಗ್ಲೀಷ್ ಪದಗಳು ಕನ್ನಡಕ್ಕೆ ಸ್ವೀಕಾರವಾಗುವ ಸಂದರ್ಭದಲ್ಲಿ ನಾಮಪದಗಳು ವ್ಯಂಜ್ಯನಾಂತ್ಯದೊಂದಿಗೆ ಬಳಕೆಯಾಗುತ್ತವೆ. ಹೀಗೆಯೇ ಕಾರ್ಟೂನುಗಳಲ್ಲಿ ಬಳಕೆಯಾಗುವ ಅನ್ಯ ಭಾಷೆಯ ಪದಗಳ ಬಳಕೆಯ ಮೂಲ, ಅರ್ಥ ಪ್ರಯೋಗವನ್ನು ಕೆಲವೊಂದು ಉದಾಹರಣೆಯ ಮೂಲಕ ಕಂಡುಕೊಳ್ಳಬಹುದಾಗಿದೆ.

**ಅಟ್ಯಾಕ್ :** (ಕ್ರಿಯಾಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಆಕ್ರಮಣ, ದಾಳಿ, ಮುತ್ತಿಗೆ ಹಾಕು, ಸುತ್ತುವರಿಯುವುದು ಎಂಬ ಅರ್ಥವನ್ನು ಕೊಡುತ್ತದೆ.

ಪ್ರಯೋಗ – 'ಅಟ್ಯಾಕ್ ಪೊಸಿಷನ್ ಆ ಬಾಂಬರ್ ಮೇಲೆ ನಿಮ್ಮವರು ಅಟ್ಯಾಕ್ ಮಾಡೋದು ಬೇಡ! ನನ್ನ ಈ ಪೊಸಿಷನ್‌ಗೆ ಅವರ ಕಡೆಯವರೇ ಕಾರಣ'. ಇದು ಒಂದು ಗುಂಪಿನವರು ಇನ್ನೊಂದು ಗುಂಪಿನವರ ಮೇಲೆ ದಾಳಿ ಮಾಡುವುದನ್ನು ಸೂಚಿಸುತ್ತದೆ. **(ಕನ್ನಡಪ್ರಭ, ಮೇ.೨೫)**

**ಆನ್‌ಲೈನ್ :**(ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ರಸ್ತೆ ಮೇಲೆ ನಿಂತು ಆಡುವ (ಲಾಟರಿ) ಒಂದು ತರಹದ ಜೂಜು ಎಂಬ ಅರ್ಥವನ್ನು ಕೊಡುತ್ತದೆ. ಆದರೆ ಈ ಪದ ಮತದಾನ ಮಾಡುವ ಮತದಾರನ ಸ್ಥಿತಿಯನ್ನು ಚಿತ್ರಿಸುವ ನಿಟ್ಟಿನಲ್ಲಿ ಬಳಕೆಯಾಗಿದೆ.

ಪ್ರಯೋಗ – 'ಆನ್‌ಲೈನ್‌ನಲ್ಲಿ ಯಾರು ನಿಲ್ತಾರೆ> ಆನ್‌ಲೈನ್‌ನಲ್ಲಾದ್ರೆ ನಾವೂ ಓಟು ಮಾಡಬಹುದು'. **(ಕನ್ನಡಪ್ರಭ, ಮೇ.೧೦)**

**ಆಸಾಮಿ :** (ನಾಮಪದ) ಮರಾಠಿ ಮೂಲದಿಂದ ಕನ್ನಡಕ್ಕೆ ಬಂದಿದ್ದು. ವ್ಯಕ್ತಿ ಮನುಷ್ಯ ಎಂಬ ಅರ್ಥಗಳನ್ನು ಕೊಡುತ್ತದೆ. ಕನ್ನಡದಲ್ಲಿ ಆಸಾಮಿ, ಆಸಮಿ ಎಂದು ಬಳಕೆಯಾಗಿದೆ.

ಪ್ರಯೋಗ – 'ಈ ಕ್ಷೇತ್ರದಲ್ಲಿ ಬಂಗಾಳಿ ಮಾತನಾಡುವ ಆಸಾಮಿಗಳು ಇದ್ದಾರೆ. ಪ್ರಚಾರಕ್ಕಾಗಿ ಆ ರಾಜ್ಯದ ಮುಖ್ಯಮಂತ್ರಿಗಳನ್ನು ಕರೆಸಬಹುದು'. ಇಲ್ಲಿ ವ್ಯಕ್ತಿಗಳು ಎಂಬ ಅರ್ಥದಲ್ಲಿ ಈ ಪದ ಪ್ರಯೋಗವಾಗಿದೆ. **(ಪ್ರಜಾವಾಣಿ, ಮೇ.೧೨)**

**ಓಟು :** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಮತ ಎಂಬ ಅರ್ಥವನ್ನು ಕೊಡುತ್ತದೆ. ಚುನಾವಣೆಗಿಂತ ಮೊದಲು ಓಟು ಕೊಡಿ ಎಂದು ರಾಜಕೀಯ ನಾಯಕ ಅತ್ತರೆ, ಚುನಾವಣೆಯ ನಂತರ ಮತದಾರ ಅಳುವ ಮತ್ತೊಂದು ಚಿತ್ರ ಈ ಎರಡು ಚಿತ್ರಗಳಲ್ಲಿ ಓಟು ಎಂಬ ಪದ ಬಳಕೆಯಾಗಿದೆ. **(ಕನ್ನಡಪ್ರಭ, ಮೇ.೩)**

**ಕಛೇರಿ :** (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ಕೆಲಸ, ಕಾರ್ಯಬಾರಗಳನ್ನು ಮಾಡುವ ನಿಶ್ಚಿತ ಸ್ಥಳ. ಕಾರ್ಯಾಲಯ, ಆಫೀಸು ೨) ಸಂಗೀತ ಸಭೆ, ಸಮಾರಂಭ ಎಂಬ ಅರ್ಥಗಳನ್ನು ಕೊಡುತ್ತದೆ. ಮರಾಠಿಯಲ್ಲಿ ಕಚೇರಿ, ಹಿಂದಿಯಲ್ಲಿ ಕಚಹರೀ ಎಂದು ಬಳಕೆಯಾಗಿದೆ.

ಪ್ರಯೋಗ – 'ಅಗ್ನಿ ಅನಾಹುತ ಅಲ್ಲ ಸಚಿವರ ಕಛೇರಿಗಳಲ್ಲಿ ಹೋಮ, ಹವನ ಇತ್ಯಾದಿ ಕಾರ್ಯಕ್ರಮ ನಡೆಯುತ್ತದೆ'. ಇಲ್ಲಿ ಕಾರ್ಯಾಲಯ ಎಂಬ ಅರ್ಥದಲ್ಲಿ ಪ್ರಯೋವಾಗಿದೆ. **(ವಿಜಯ ಕರ್ನಾಟಕ, ಜೂ.೪)**

**ಕ್ರಿಮಿನಲ್**: (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. (ಗು) ಅಪರಾಧಿ ಎಂಬ ಅರ್ಥವನ್ನು ಕೊಡುತ್ತದೆ.

ಪ್ರಯೋಗ – 'ಅಭ್ಯರ್ಥಿಗಳಿಗೆ ಕ್ರಿಮಿನಲ್ ಹಿನ್ನೆಲೆ ಇಲ್ಲ. ಆದರೆ ಅವರ ಹಿನ್ನೆಲೆಯಲ್ಲಿರುವವರೆಲ್ಲರೂ ಕ್ರಿಮಿನಲ್‌ಗಳೇ!'. ಚುನಾವಣೆಯಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳು ಕ್ರಿಮಿನಲ್ ಆಗದಿದ್ದರೂ ಅವರ ಹಿಂಬಾಲಕರು ಕ್ರಿಮಿನಲ್ ಆಗಿರುತ್ತಾರೆ ಎಂಬುದನ್ನು ಸೂಚಿಸುತ್ತದೆ.

**ಖಾತೆ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ೧)ಕಿರ್ದಿ ಪುಸ್ತಕದಲ್ಲಿ ನಮೂದಾಗಿರುವ ಜಮಾ ಖರ್ಚಿನ ಭಾಗ, ಜಮಾ ಖರ್ಚಿನಲ್ಲಿ ಒಬ್ಬ ವ್ಯಕ್ತಿ, ಸಂಸ್ಥೆ ಅಥವಾ ವಿಷಯಕ್ಕೆ ಮೀಸಲಾದ ಲೆಕ್ಕದ ವಿಭಾಗ ೨) ಲೆಕ್ಕದ ಪುಸ್ತಕ, ಖತಾವಣಿ ಪಟ್ಟಿ ೩) ಆಸ್ತಿ ತನಗೆ ಸೇರಿದ್ದು ಎಂದು ಸರ್ಕಾರಿ ಧಪ್ತರಿನಲ್ಲಿ ದಾಖಲು ಮಾಡಿಸುವುದು. ಹೀಗೆ ದಾಖಲಾದ ಆಸ್ತಿ. ೪) ಮಂತ್ರಿಮಂಡಲದಲ್ಲಿ ಪ್ರತಿಯೊಬ್ಬ ಮಂತ್ರಿಗೆ ಒಪ್ಪಿಸುವ ಆಡಳಿತ ಶಾಖೆ ಎಂಬ ಅರ್ಥವನ್ನು ಕೊಡುತ್ತದೆ. ಹಿಂದಿಯಲ್ಲಿ ಖಾತಾ, ಮರಾಠಿಯಲ್ಲಿ ಖಾತೇ, ಪಾರಸಿಯಲ್ಲಿ ಖತ್ ಎಂದು ಬಳಕೆಯಲ್ಲಿದ್ದರೆ, ಕನ್ನಡದಲ್ಲಿ ಖಾತೆ, ಖಾತಾ ಎಂದು ಬಳಕೆಯಲ್ಲಿದೆ.

ಪ್ರಯೋಗ – 'ದಕ್ಷಿಣದಲ್ಲಿ ಬಿ.ಜೆ.ಪಿ. ಖಾತೆ ತೆಗೆಯುತ್ತಿದ್ದಂತೆ ಕೆಲವರು ಕ್ಯಾತೆ ತೆರೆಯುತ್ತಿದ್ದಾರೆ'. ಅಂದರೆ ಇಲ್ಲಿ ಸರಕಾರದ ಆಡಳಿತ ಒಂದು ಭಾಗ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಮೇ.೩೧)**

**ಗ್ಯಾಸ್** : (ನಾಮಪದ) ಇಂಗ್ಲೀಷ್ ಪದವಾಗಿದ್ದು, ಇಂಗ್ಲೀಷನ ಪದವು 'Gas' ಪದವು ೧) ಅನಿಲ ೨) ಸೀಮೆಎಲ್ಲೆಯ ಅನಿಲದಿಂದ ಉರಿಸುವ ದೀಪ, ಪೆಟ್ರೊಮ್ಯಾಕ್ಸ್ ೩) (ಆಲಂ) ಪೊಳ್ಳುಮಾತು, ಬುರುಟೆ ಎಂಬ ಅರ್ಥಗಳನ್ನು ಕೊಡುತ್ತದೆ.

ಪ್ರಯೋಗ – 'ರಸಗೊಬ್ಬರ ಪೆಟ್ರೋಲ್ ಗ್ಯಾಸ್ ವಿರುದ್ಧ ಪ್ರತಿಭಟನೆ'. ಇಲ್ಲಿ ಗ್ಯಾಸ್ ಎಂಬ ಇಂಧನ ಎಂಬ ಅರ್ಥದಲ್ಲಿ ಬಳಕೆಯಾಗಿದೆ. **(ವಿಜಯ ಕರ್ನಾಟಕ, ಜೂ.೬)**

**ಡೋರ್‌ಟುಡೋರ್**: (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ೧) ಬಾಗಿಲಿಂದ ಬಾಗಿಲಿಗೆ ೨) ಮನೆಯಿಂದ ಮನೆಗೆ, ಬಿಟ್ಟು ಬಿಡದೆ ಎಂಬ ಅರ್ಥವನ್ನು ಕೊಡುತ್ತದೆ.

ಪ್ರಯೋಗ – 'ಡೋರ್-ಟು-ಡೋರ್ ಕ್ಯಾನ್‌ವಾಸ್ ಮಾಡೀದ್ರೆ ಇವರು ಬಾರ್-ಟು-ಬಾರ್ ಕ್ಯಾನ್‌ವಾಸ್ ಮಾಡ್ತಿದ್ದಾರೆ'. ಇಲ್ಲಿ ಮನೆಯಿಂದ ಮನೆಗೆ ಎಂಬ ಅರ್ಥದಲ್ಲಿ ಬಳಕೆಯಾಗಿದೆ. **(ಕನ್ನಡಪ್ರಭ, ಮೇ.೪)**

**ಧಂದೆ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ೧) ಜೀವನ್ಯೋದ್ಯೋಗ, ಹೊಟ್ಟೆಪಾಡಿನ ವೃತ್ತಿ ೨) ಕೆಲಸ, ಕಾರ್ಯ ೩) ವ್ಯಾಪಾರ ಎಂಬ ಅರ್ಥಗಳನ್ನು ಕೊಡುತ್ತದೆ. ಹಿಂದಿ ಭಾಷೆಯಲ್ಲಿ ದಂಧಾ, ಮರಾಠಿಯಲ್ಲಿ ಧಂದಾ ಎಂದು,

ಗುಜರಾತಿಯಲ್ಲಿ ಧಂದೋ ಎಂದು ಬಳಕೆಯಲ್ಲಿದೆ. ಕನ್ನಡದಲ್ಲಿ ದಂಧೆ, ಧಂದೆ ಎಂದು ಬಳಕೆಯಾಗುತ್ತದೆ.

ಪ್ರಯೋಗ – 'ಇದು ಧಂದೆ ಅಂತ ತಿಳಿದಿರಲಿಲ್ಲ. ಇದನ್ನೊಂದು ಗೃಹ ಕೈಗಾರಿಕೆ ಅನ್ನೊಂಡಿದ್ವಿ ಸಾರ್'. (ಕಳ್ಳಭಟ್ಟಿ ದಂಧೆ). ಇಲ್ಲಿ ಧಂದೆ ಎಂಬ ಪದವು ಉದ್ಯೋಗ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. (**ಪ್ರಜಾವಾಣಿ, ಮೇ.೨೧**)

**ಪಾರ್ಟಿ ಫಂಡ್** : (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಪಕ್ಷದ ಮುಖಂಡರು ಕಾರ್ಯಕರ್ತರಿಗೆ ಪಕ್ಷದ ಬೆಳವಣಿಗೆಗಾಗಿ ಕೊಡುವ ಹಣ ಎಂದು ಅರ್ಥ.

ಪ್ರಯೋಗ – 'ಒಂದು ಸಣ್ಣಗಾತ್ರದ ಚೀಲದಲ್ಲಿ ನೋಟಿನ ಕಟ್ಟುಗಳನ್ನು ತೋರಿಸಿದರೆ, ಇನ್ನೊಂದು ದೊಡ್ಡಗಾತ್ರದ ಚೀಲದಲ್ಲಿ ಅಭ್ಯರ್ಥಿಯ ನೋಟಿನ ಕಟ್ಟುಗಳನ್ನು ತೋರಿಸಲಾಗಿದೆ. ಅಂದರೆ ಈ ಸಂದರ್ಭವು ಚುನಾವಣೆಯಲ್ಲಿ ಪಾರ್ಟಿಫಂಡಿಗಿಂತ ಅಭ್ಯರ್ಥಿ ಖರ್ಚು ಮಾಡುವ ಹಣ ಅಧಿಕವಾಗಿರುತ್ತದೆ'. ಬಳಕೆಯಾದ ಬಗೆಯನ್ನು ಎರಡು ಚಿತ್ರಗಳ ಮೂಲಕ ತಿಳಿದುಕೊಳ್ಳಬಹುದು. (**ಕನ್ನಡಪ್ರಭ, ಮೇ.೫**)

**ಫೈಲ್** : (ನಾಮಪದ) ಇಂಗ್ಲಿಷ್ ಮೂಲದಿಂದ ಬಂದಿದ್ದು. ಪತ್ರಗಳನ್ನು ಸಂಗ್ರಹಿಸುವ ಪುಸ್ತಕ. ಮಹತ್ವದ ವಿಷಯ ಅಥವಾ ಸಂಗತಿಗಳನ್ನು ಒಳಗೊಂಡ ಪತ್ರಗಳ ಸಂಗ್ರಹ ಎಂಬ ಅರ್ಥದಲ್ಲಿ ಬಳಕೆಯಾಗಿದೆ.

ಪ್ರಯೋಗ – 'ಓ ಆಶ್ವಾಸನೆಗಳ ಫೈಲ್!. ಸದ್ಯಕೆ ಕಪಾಟಿನ ಒಳಗಡೆ ಮುಂದಿನ ಚುನಾವಣೆಯಲ್ಲಿ ಉಪಯೋಗಕ್ಕೆ ಬರುತ್ತದೆ!. ಇಲ್ಲಿ ಇಡೀ ರಾಜಕೀಯ ನಾಯಕರ ಹುಸಿ ಭರವಸೆಗಳನ್ನು ಮತ್ತು ಮತದಾರರ ಗೋಳಾಟವನ್ನು ಚಿತ್ರಿಸುತ್ತದೆ. (**ಉದಯವಾಣಿ, ಮೇ.೬**)

**ಬೋರ್ಡ್**: (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ೧) ಸೀಮೆಸುಣ್ಣದಿಂದ ಬರೆಯಲು ಬರುವಂತೆ ಸಿದ್ಧಪಡಿಸಿದ ಕರಿಯ ಬಣ್ಣದ ಫಲಕ ೨) ಹೆಸರು, ವಿಳಾಸ ಮೊದಲಾದವುಗಳನ್ನು ಬರೆದು ಪ್ರದರ್ಶಿಸುವ ಫಲಕ. ನಾಮಫಲಕ ಎಂಬ ಅರ್ಥಗಳನ್ನು ನೀಡುತ್ತದೆ. ಇದು ಇಂಗ್ಲೀಷ್‌ನ 'Board' ಎಂಬ ಪದದಿಂದ ಕನ್ನಡಕ್ಕೆ ಬರುವಾಗ 'ಬೋರ್ಡು' ಎಂದಾಗಿದೆ.

ಪ್ರಯೋಗ – 'ಚುನಾವಣೆಯ ಸಮಯವಲ್ಲದೆ ಬೇರೆ ಸಮಯದಲ್ಲಿ ನಾವು ಇಂತಹ 'ಬೋರ್ಡು' ಹಾಕಲು ಸಾಧ್ಯನ?'. ಇಲ್ಲಿ ನಾಮಫಲಕ ಎಂಬ ಅರ್ಥದಲ್ಲಿ ಬಳಕೆಯಾಗಿರುವುದು ಕಂಡು ಬರುತ್ತದೆ. (**ಕನ್ನಡಪ್ರಭ, ಮೇ.೭**)

**ರೆಕಾರ್ಡ್ :** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ದಾಖಲೆ, ಇದುವರೆಗೂ ಯಾರು ಸಾಧಿಸದೆ ಇರುವಂತಹದ್ದು ಎಂಬ ಅರ್ಥ ಕೊಡುತ್ತದೆ ಎಂಬ ಅರ್ಥ ಕೊಡುತ್ತದೆ.

ಪ್ರಯೋಗ – 'ನಮಗೆ ನಿಮ್ಮ ಗಿನ್ನಿಸ್ ರೆಕಾರ್ಡ್‌ಗಿಂತ ನಮ್ಮ ಕ್ಷೇತ್ರದ ರೆಕಾರ್ಡ್ ಮುಖ್ಯ'. ಮಾಜಿ ಮುಖ್ಯಮಂತ್ರಿ ಧರ್ಮಸಿಂಗ್ ಕಳೆದ ಚುನಾವಣೆಯಲ್ಲಿ ಗೆದ್ದಿದ್ದರೆ, ಅವರ ಹೆಸರು ದಾಖಲೆಯ ಪಟ್ಟಿಯಲ್ಲಿ ಸೇರಿಕೊಳ್ಳುತ್ತಿತ್ತು. ಆದರೆ ಈ ಚುನಾವಣೆಯಲ್ಲಿ ಕ್ಷೇತ್ರದ ಜನರು ಸೋಲಿಸುವುದರ ಮೂಲಕ ಇನ್ನೊಂದು ರೀತಿಯ ದಾಖಲೆಯನ್ನು ಮಾಡಿರುವುದನ್ನು ಸೂಚಿಸುತ್ತದೆ. **(ಕನ್ನಡಪ್ರಭ, ಮೇ.೨೬)**

**ರೈತ :** (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ಆರಂಭ ಮಾಡುವವನು, ಒಕ್ಕಲಿಗ, ವ್ಯವಸಾಯಗಾರ, ಕೃಷಿಕ, ಸಾಗುವಳಿದಾರ ಎಂಬ ಅರ್ಥವನ್ನು ಹೊಂದಿದೆ. ಹಿಂದಿಯಲ್ಲಿ ರಯ್ಯತ್, ರಯ್ಯತಿ, ಮರಾಠಿಯಲ್ಲಿ ರಯತ್ ಎಂದು, ಅರೆಬ್ಬಿಕ್ ಭಾಷೆಯಲ್ಲಿ ರಈಯ್ಯತ್, ರಹಿಯತ್ ಎಂದು, ಇಂಗ್ಲೀಷ್‌ನಲ್ಲಿ 'Ryat' ಎಂದು ಬಳಕೆಯಾಗಿದೆ.

ಪ್ರಯೋಗ – 'ಮಣ್ಣಿನ ಮಗನ ಹೆಸರಲ್ಲಿ ಪ್ರಮಾಣ ವಚನ ಸ್ವೀಕಾರ ಮಾಡಿದ್ರೆ ಜನಕ್ಕೆ ಗೊತ್ತಾಗ ಬಹುದೆಂದು ರೈತನ ಹೆಸರಲ್ಲಿ ಮಾಡಿದ್ದಾರೆ'. **(ವಿಜಯ ಕರ್ನಾಟಕ, ಜೂ.೭)**

**ವಾಕಿಂಗ್:** (ಕ್ರಿಯಾಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ನಡೆದಾಡು, ತಿರುಗಾಡು ಎಂಬ ಅರ್ಥವನ್ನು ಕೊಡುತ್ತದೆ.

ಪ್ರಯೋಗ – 'ಪಕ್ಷಾಂತರ ಅಲ್ಲ. ಈ ಪಕ್ಷದಲ್ಲಿ ಉಸಿರು ಕಟ್ಟಿದ ವಾತಾವರಣ ಇತ್ತಲ್ಲ. ಅದಕ್ಕೆ ಆ ಪಕ್ಷದವರೆಗೆ ವಾಕಿಂಗ್ ಹೋಗೆ ಬಂದೆ'. ಅಂದರೆ ರಾಜಕೀಯ ನಾಯಕರಿಗೆ ಒಂದು ಪಕ್ಷವನ್ನು ಬಿಟ್ಟು ಮತ್ತೊಂದು ಪಕ್ಷಕ್ಕೆ ಹೋಗುವುದು (ಪಕ್ಷಾಂತರ) ವಾಕಿಂಗ್ ಮಾಡಿದಷ್ಟೇ ಸುಲಭ ಎಂಬುದನ್ನು ಸೂಚಿಸುತ್ತದೆ. **(ಪ್ರಜಾವಾಣಿ, ಮೇ.೧೫)**

**ಸ್ಪೀಕರ್ :** (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಸಭಾಧ್ಯಕ್ಷ, ಮಾತನಾಡುವವರು ಹಾಗೂ ಭಾಷಣಕಾರ ಎಂಬ ಅರ್ಥಗಳನ್ನು ಕೊಡುತ್ತದೆ.

ಪ್ರಯೋಗ – 'ಸ್ಪೀಕರ್ ಹುದ್ದೆ ವರಿಷ್ಠರ ನಿರ್ಧಾರಕ್ಕೆ ಬದ್ಧ' ಎಂಬುದು ಬಿ.ಜೆ.ಪಿ. ಯ ನಾಯಕ ಜಗದೀಶ ಶೆಟ್ಟರು ಸಭಾಧ್ಯಕ್ಷನಾಗುವುದು ಪಕ್ಷದ ಮುಖಂಡರ ಜೊತೆ ಸಮಾಲೋಚನೆ ಮಾಡಿ ತೀರ್ಮಾನ ತೆಗೆದುಕೊಳ್ಳಲಾಗುವುದು ಎಂಬುದನ್ನು ತೀರ್ಮಾನಿಸುತ್ತದೆ. **(ವಿಜಯ ಕರ್ನಾಟಕ, ಏ.೬)**

ಹೀಗೆ ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ದಿನಪತ್ರಿಕೆಗಳಲ್ಲಿ ಮೂಡಿ ಬರುವ ವ್ಯಂಗ್ಯಚಿತ್ರಗಳಲ್ಲಿನ ಅನ್ಯ ಭಾಷಾ ಬಳಕೆಯಲ್ಲಿ ಅತಿ ಹೆಚ್ಚು ಇಂಗ್ಲೀಷ್ ಪದಗಳು ಬಳಕೆಯಾಗುತ್ತಿದ್ದು, ಅವು ಕನ್ನಡಕ್ಕೆ ಬರುವಾಗ ವ್ಯಂಜನಾಂತ್ಯವಾಗುತ್ತವೆ. ಅಲ್ಲದೆ, ಅತಿಹೆಚ್ಚು ನಾಮ ಪದಗಳಾಗಿರುತ್ತವೆ. ಅಲ್ಲಲ್ಲಿ ಕ್ರಿಯಾಪದ, ಗುಣಪದಗಳು ಕಂಡು ಬರುತ್ತವೆ. ವ್ಯಂಗ್ಯಚಿತ್ರಗಳಲ್ಲಿ ಅರೆಬ್ಬಿಕ್, ಉರ್ದು, ಮರಾಠಿ ಹಾಗೂ ಹಿಂದಿ ಪದಗಳ ಬಳಕೆ ಕಡಿಮೆ ಎಂದು ಹೇಳಬಹುದು.

**ಅಡಿಟಿಪ್ಪಣಿ :**

೧. ಡಾ.ಅಶೋಕಕುಮಾರ ರಂಜೇರಿ, ಸಂ.೬೪, ೨೦೦೮, **ನಮ್ಮ ಕನ್ನಡ,** ಕನ್ನಡ ಭಾಷೆ ಅಧ್ಯಯನ ವಿಭಾಗ, ಹಂಪಿ.

೨. ಡಾ.ಅಶೋಕಕುಮಾರ ರಂಜೇರಿ, ಸಂ.೬೪, ೨೦೦೮, **ನಮ್ಮ ಕನ್ನಡ,** ಕನ್ನಡ ಭಾಷೆ ಅಧ್ಯಯನ ವಿಭಾಗ, ಹಂಪಿ.

## ೩.೬. ವ್ಯವಹಾರಿಕ (ವಾಣಿಜ್ಯ ಪುರವಣಿ) ವರದಿಗಳಲ್ಲಿ ಅನ್ಯಭಾಷಾ ಬಳಕೆ

ವ್ಯಾಪಾರ, ವಹಿವಾಟು ಮುಂತಾದವುಗಳಿಗೆ ಸಂಬಂಧಿಸಿದ ವರದಿಗಳನ್ನು ಪ್ರಕಟ ಮಾಡುವ ಕಾಲಂವನ್ನು ವಾಣಿಜ್ಯ (ವ್ಯವಹಾರಿಕ) ಪುರವಣಿ ಎಂದು ಕರೆಯಲಾಗುತ್ತದೆ. ಈ ಕಾಲಂನಲ್ಲಿ ವ್ಯಾಪಾರಕ್ಕೆ ಸಂಬಂಧಿಸಿದ ವಿವರಣಾತ್ಮಕ ವಿಶ್ಲೇಷಣೆಯನ್ನು ಕಾಣಬಹುದು. ವ್ಯವಹಾರಿಕ ಕ್ಷೇತ್ರಗಳಲ್ಲಿ ಮತ್ತು ಅಂತರಾಷ್ಟ್ರೀಯ ಮಟ್ಟದ ವ್ಯವಹಾರದ ಆಗು-ಹೋಗುಗಳನ್ನು ತಿಳಿದುಕೊಳ್ಳಲು ಆಸಕ್ತಿ ಇರುವ ವಿಶೇಷ ಓದುವ ವರ್ಗದ ಜನರಿರುತ್ತಾರೆ.

ಪ್ರತಿಯೊಂದು ಕನ್ನಡ ದಿನಪತ್ರಿಕೆಗಳು ವ್ಯಾಪಾರಕ್ಕೆ ಸಂಬಂಧಿಸಿದ ವರದಿಗಳನ್ನು ಒಂದು ನಿರ್ದಿಷ್ಟವಾದ ಪುಟದಲ್ಲಿ ಪ್ರಕಟಿಸುತ್ತವೆ. ವಾಣಿಜ್ಯ ಪುರವಣಿ ಇಲ್ಲದ ಪತ್ರಿಕೆಗಳೇ ಇಲ್ಲ ಎಂದು ಹೇಳಬಹುದು. ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದ ಮಾರುಕಟ್ಟೆಯಲ್ಲಿನ ವ್ಯಾಪಾರ ವಹಿವಾಟನ್ನು ವಸ್ತುಗಳ ಬೆಲೆಗಳ ಏರಿಳಿತ ಮುಂತಾದವುಗಳು ಈ ಪುರವಣಿಯ ವಸ್ತುಗಳಾಗಿರುತ್ತವೆ.

ಜಾಗತೀಕ ಮಟ್ಟದಲ್ಲಿ ವ್ಯಾಪಾರಕ್ಕೆ ಸಂಬಂಧಿಸಿದ ಜ್ಞಾನ ಅವಶ್ಯಕವಾಗಿರುವುದರಿಂದ ವ್ಯಾಪಾರ, ವಹಿವಾಟನ್ನು ಮಾಡುವ ಜನರನ್ನು ಈ ಕಾಲಂ ಬಹು ಬೇಗನೆ ತನ್ನ ಕಡೆಗೆ ಸೆಳೆದುಕೊಳ್ಳುತ್ತದೆ. ವ್ಯಾಪಾರ ಯಾವುದೇ ದೇಶದ ಆರ್ಥಿಕ ಚಟುವಟಿಕೆಯನ್ನು, ನಿಯಂತ್ರಿಸುವ ಬುನಾದಿಯಾಗಿರುತ್ತದೆ. ಆದ್ದರಿಂದ ಈ ಕಾಲಂ ವ್ಯಾಪಾರದ ಜನರಿಗೆ ಹೆಚ್ಚು ಪ್ರಿಯವಾಗುತ್ತದೆ.

ವಾಣಿಜ್ಯ ಪುರವಣಿಯಲ್ಲಿ ಬಳಕೆಯಾಗುವ ಅನ್ಯ ಭಾಷಾ ಪದಗಳು ವಿಶೇಷವಾಗಿ ಓದುಗರನ್ನು ಆಕರ್ಷಿಸುತ್ತವೆ. ಈ ಕಾಲಂನಲ್ಲಿ ಹೆಚ್ಚಾಗಿ ಅರೆಬ್ಬಿಕ್, ಹಿಂದಿ, ಮರಾಠಿ ಹಾಗೂ ಪಾರಸಿ ಪದಗಳಿಗಿಂತ ಇಂಗ್ಲೀಷ್ ಭಾಷೆಯ ಪದಗಳು ಹೆಚ್ಚಾಗಿ ಕಂಡು ಬರುತ್ತವೆ. ಈ ಅನ್ಯ ಭಾಷಾ ಪದಗಳ ಮೂಲ, ಅರ್ಥ, ಪ್ರಯೋಗವನ್ನು ಕೆಲವೊಂದು ನಿದರ್ಶನಗಳ ಮೂಲಕ ತಿಳಿದುಕೊಳ್ಳಬಹುದು.

**ಗುಡ್‌ವಿಲ್:** (ಗುಣಪದ) ಇಂಗ್ಲೀಷ್ ಮೂಲದಿಂದ ಬಂದಿದೆ. ಒಳ್ಳೆಯ ಹೆಸರು, ಮಾರುಕಟ್ಟೆಯಲ್ಲಿ ಗಳಿಸುವ ಹೆಸರು, ಮೊದಲಿನಿಂದಲೂ ಇರುವ ಉತ್ತಮವಾದ ಹೆಸರು ಎಂಬ ಅರ್ಥಗಳನ್ನು ಹೊಂದಿದೆ.
ಪ್ರಯೋಗ – 'ಅವರದೇಯಾದ ಗುಡ್‌ವಿಲ್ ಹಿನ್ನೆಲೆಯಲ್ಲಿ ಅದನ್ನೆಲ್ಲ ಒಪ್ಪಬೇಕು'. **(ಸಂಯುಕ್ತ ಕರ್ನಾಟಕ, ಜೂ.೪)**

**ಜರೂರು :** (ಗುಣಪದ) ಅರೆಬ್ಬಿಕ್ ಮೂಲದಿಂದ ಬಂದಿದ್ದು. ೧) ಅಗತ್ಯವಾದ, ಕೂಡಲೇ ಆಗಬೇಕಾದ ೨) ಅವಶ್ಯಕತೆ ಅಗತ್ಯ ಎಂಬ ಅರ್ಥಗಳನ್ನು ಹೊಂದಿದೆ. ಅರೆಬ್ಬಿ, ಪಾರಸಿ, ಹಿಂದಿ ಹಾಗೂ ಮರಾಠಿಯಲ್ಲಿ 'ಜರೂರ್' ಎಂದು ಬಳಕೆಯಾಗಿದೆ. ಕನ್ನಡದಲ್ಲಿ ವ್ಯಂಜನಾಂತ್ಯ ಕಳೆದುಕೊಂಡು ಕೆಲವೊಮ್ಮೆ 'ಇ' ಕಾರದೊಂದಿಗೆ ಇನ್ನೂ ಕೆಲವೊಮ್ಮೆ 'ಉ' ಕಾರಂತ್ಯದೊಂದಿಗೆ ಜರೂರಿ,

ಜರೂರು ಎಂದು ಬಳಕೆಯಾದರೆ, ಇನ್ನೂ ಕೆಲವೊಂದು ಬಾರಿ ವ್ಯಂಜನಾಂತ್ಯವನ್ನು ಉಳಿಸಿಕೊಂಡು 'ಅತ್ ಎಂಬ ಪ್ರತ್ಯಯ ದೊಂದಿಗೆ ಅಂದರೆ 'ಜರೂರತ್' ಎಂದು ಬಳಕೆಯಾಗುತ್ತದೆ.
ಪ್ರಯೋಗ – 'ಬೆಲೆ ನಿಗದಿ ನಿಯಂತ್ರಣ ಜಾರಿಗೊಂದು ಇಲಾಖೆ ಆಗಬೇಕಾದದ್ದು, ಅತೀ ಜರೂರಾಗಿದೆ'. ಇಲ್ಲಿ ಅವಶ್ಯಕತೆ ಎಂಬ ಅರ್ಥದಲ್ಲಿ ಈ ಪದ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೪)**

**ದಂಗು** : (ನಾಮಪದ) ಪಾರಸಿ ಮೂಲದಿಂದ ಬಂದಿದ್ದು. ೧) ಬೆರಗು, ಸೋಜಿಗ ೨) ಹೆದರಿಕೆ, ಗಾಬರಿ ೩) ಪರವಶತೆ, ತನ್ಮಯತೆ, ಮೈಮರೆ ಮುಂತಾದ ಅರ್ಥಗಳನ್ನು ಹೊಂದಿದೆ. ಪಾರಸಿ, ಹಿಂದಿ ಹಾಗೂ ಮರಾಠಿಯಲ್ಲಿ ದಂಗ್ ಎಂದು ಬಳಕೆಯಾದರೆ ಕನ್ನಡದಲ್ಲಿ ಕೆಲವೊಮ್ಮೆ ಯಥಾವತ್ತಾಗಿ 'ದಂಗ್' ಎಂದು, ಇನ್ನೂ ಕೆಲವೊಮ್ಮೆ ವ್ಯಂಜನಾಂತ್ಯ ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ 'ದಂಗು' ಎಂದು ಬಳಕೆಯಾಗುತ್ತದೆ.
ಪ್ರಯೋಗ – 'ದಿನನಿತ್ಯದ ವಸ್ತುಗಳ ಬೆಲೆ ಏರಿಕೆಯಿಂದ ಜನ ಸಾಮಾನ್ಯರ ಬದುಕು ದಂಗು ಬಡಿದಿದೆ'. ಇಲ್ಲಿ ಹೆದರಿಕೆ ಎಂಬ ಅರ್ಥದಲ್ಲಿ ಈ ಪದ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೪)**

**ದರ** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು, ನಿಗದಿಯಾದ ಕ್ರಯ ಎಂಬ ಅರ್ಥಗಳನ್ನು ಹೊಂದಿದೆ. ಹಿಂದಿ ಹಾಗೂ ಮರಾಠಿಯಲ್ಲಿ ದರ್ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜನಾಂತ್ಯವನ್ನು ಕಳೆದುಕೊಂಡು ಹೃಸ್ವಸ್ವರವಾಗಿ 'ದರ' ಎಂದು ಬಳಕೆಯಾಗಿದೆ.
ಪ್ರಯೋಗ – 'ಅದೇ ವಿಧದ ಯಂತ್ರಗಳ ದರಕ್ಕಿಂತ ತೀರಾ ಕಡಿಮೆ. ಬಹುತೇಕ ಅರ್ಧ ದರ'. ಇಲ್ಲಿ ದರ ಎಂಬ ಪದವು ಬೆಲೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂಯುಕ್ತ ಕರ್ನಾಟಕ, ಜೂ.೪)**

**ಪವರ್‌ಚೈನ್**: (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಶಕ್ತಿಯುತವಾದ, ಗಟ್ಟಿಯಾದ ಸರಪಳಿ, ಗಟ್ಟಿಮುಟ್ಟಾದ, ಗುಣಮಟ್ಟದ ಸರಪಳಿ ಎಂಬ ಅರ್ಥಗಳನ್ನು ಹೊಂದಿದೆ
ಪ್ರಯೋಗ – 'ಅದೇ ರೀತಿ ಪವರ್‌ಚೈನ್‌ನ್ನು ಬಳಸಬಹುದು'. ಇಲ್ಲಿ ಗಟ್ಟಿಮುಟ್ಟಾದ ಸರಪಳಿ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂಯುಕ್ತ ಕರ್ನಾಟಕ, ಜೂ.೪)**

**ಪೈಕಿ** : (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ೧) ಸಂಬಂಧಿಸಿದುದರಲ್ಲಿ ೨) ಒಳಗೆ, ಒಂದೇ ಗುಂಪು ಮುಂತಾದ ಅರ್ಥಗಳನ್ನು ಹೊಂದಿದೆ.

ಮರಾಠಿಯಲ್ಲಿ ಪಯಿಕೀ ಎಂದು, ಸಂಸ್ಕೃತದಲ್ಲಿ ಪಂಕ್ತಿ ಎಂದು ಅಥವಾ ಪಾದಿಕಾ ಎಂದು ಬಳಕೆಯಾದರೆ, ಕನ್ನಡದಲ್ಲಿ ದೀರ್ಘಾಕ್ಷರವನ್ನು ಕಳೆದುಕೊಂಡು ಯಥಾವತ್ತಾಗಿ 'ಪೈಕಿ' ಎಂದು ಬಳಕೆಯಾಗಿದೆ.
ಪ್ರಯೋಗ – 'ಕಂಪನಿಗಳ ಪೈಕಿ ಕ್ಯಾಲಿಫೋರ್ನಿಯಾ ಮೂಲದ ಸಿಗ್ನೇಟ್ ಸೋಲಾರ್ ಒಂದು'. ಇಲ್ಲಿ ಗುಂಪಿಗೆ ಸೇರಿದ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂಯುಕ್ತ ಕರ್ನಾಟಕ, ಜೂ.೪)**

**ಬ್ಲೇಡ್** : (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ಹರಿತವಾದ ಆಯುಧ, ರಿಜರ್, ತೆಳುವಾದ ಕೊರೆಯುವ ಸಾಮಾಗ್ರಿ ಎಂದು ಅರ್ಥವನ್ನು ಹೊಂದಿದೆ.
ಪ್ರಯೋಗ – 'ಬೇರೆ ಸೈಜಿನ ಬ್ಲೇಡ್‌ಗಳನ್ನು ಅಳವಡಿಸಬಹುದು'. ಇಲ್ಲಿ ಹರಿತವಾದ, ತೆಳುವಾದ ಆಯುಧ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂಯುಕ್ತ ಕರ್ನಾಟಕ, ಜೂ.೪)**

**ಮೊಬಲಗು:** (ನಾಮಪದ) ಹಿಂದಿ ಮೂಲದಿಂದ ಬಂದಿದ್ದು. ಹಣ, ರಕಮು ಒಟ್ಟು ಹಣ, ಮೊತ್ತ ಮುಂತಾದ ಅರ್ಥಗಳನ್ನು ಹೊಂದಿದೆ. ಹಿಂದಿಯಲ್ಲಿ ಮುಬಲಿಗ್ ಎಂದು, ಮರಾಠಿಯಲ್ಲಿ ಮುಬಲಕ್, ಮುಬ್ಲಗ್ ಎಂದು ಬಳಕೆಯಾದರೆ, ಅರೆಬ್ಬಿಕ್‌ನಲ್ಲಿ ಮುಬ್ಲಘ್ ಎಂದು ಬಳಕೆಯಾಗಿದೆ. ಕನ್ನಡದಲ್ಲಿ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ 'ಮೊಬಲಗು' ಎಂದು ಬಳಕೆಯಲ್ಲಿದೆ.
ಪ್ರಯೋಗ – 'ಅವರು ತೆತ್ತ ತೆರಿಗೆಗಿಂತ ಹೆಚ್ಚಿನ ಮೊಬಲಗನ್ನು ಬಳಕೆದಾರರಿಂದ ವಸೂಲಿ ಮಾಡಿಕೊಳ್ಳುತ್ತಿದ್ದರು'. ಇಲ್ಲಿ ಒಟ್ಟು ಹಣ ಎಂಬ ಅರ್ಥದಲ್ಲಿ ಈ ಪದ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೪)**

**ವಹಿವಾಟು:** (ನಾಮಪದ) ಮರಾಠಿ ಮೂಲದಿಂದ ಬಂದಿದ್ದು. ಕಾರ್ಯಭಾರ, ವ್ಯವಹಾರ, ವ್ಯಾಪಾರ ಎಂಬ ಅರ್ಥಗಳನ್ನು ಹೊಂದಿದೆ. ಮರಾಠಿಯಲ್ಲಿ ವಹಿವಾಟ್, ವಹಿವಟ್ ಎಂದು ಬಳಕೆಯಲ್ಲಿದದರೆ, ಪ್ರಾಕೃತದಲ್ಲಿ ವಹಿವಟ್ಟ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯವಾಗಿ 'ವಹಿವಾಟು' ಎಂದು ಬಳಕೆಯಾಗಿದೆ.
ಪ್ರಯೋಗ – 'ಮಾರುಕಟ್ಟೆ ವಹಿವಾಟು ೩ ಶತಕೋಟಿ ಡಾಲರ್‌ಗಳಷ್ಟಿದೆ'. ಇಲ್ಲಿ ವಹಿವಾಟು ಎಂಬ ಪದವು ವ್ಯವಹಾರ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂಯುಕ್ತ ಕರ್ನಾಟಕ, ಜೂ.೪)**

**ವಾರಸು** : (ನಾಮಪದ) ಅರೆಬ್ಬಿಕ್ ಭಾಷೆಯ ಮೂಲದಿಂದ ಬಂದಿದ್ದು. ವಂಶ ಪರಂಪರೆಯಿಂದ ಬರುವ ಆಸ್ತಿಯ ಹಕ್ಕು, ಪಿತ್ರಾರ್ಜಿತ ಹಕ್ಕು ಎಂಬ

ಅರ್ಥಗಳನ್ನು ಹೊಂದಿದೆ. ಅರೆಬ್ಬಿಯಲ್ಲಿ ವಾರಿಸ್, ಹಕ್ಕುದಾರ ಎಂದು ಬಳಕೆಯಾದರೆ, ಹಿಂದಿ ಹಾಗೂ ಮರಾಠಿಯಲ್ಲಿ ವಾರಸ್, ವಾರಿಸ್ ಎಂದು ಬಳಕೆಯಾಗಿದೆ. ಕನ್ನಡದಲ್ಲಿ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ 'ವಾರಸು' ಎಂದು ಬಳಕೆಯಾಗಿದೆ.

ಪ್ರಯೋಗ – 'ವಾರಸುದಾರರು ಹಣ ವಾಪಸ್ ಮಾಡಿ ಮನೆಯನ್ನು ತಮ್ಮ ಸುಪರ್ದಿಗೆ ಪಡೆಯಬಹುದು'. ಇಲ್ಲಿ ಹಕ್ಕುದಾರ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೪)**

**ಸಗಟು** : (ಗುಣಪದ) ಮರಾಠಿ ಮೂಲದಿಂದ ಬಂದಿದ್ದು. ೧) ಸಂಪೂರ್ಣ, ಎಲ್ಲ, ಇಡೀ, ಒಟ್ಟು ೨) ಒಟ್ಟು, ಮೊತ್ತ, ರಾಶಿ ಮುಂತಾದ ಅರ್ಥಗಳನ್ನು ಹೊಂದಿದೆ. ಮರಾಠಿಯಲ್ಲಿ ಸಗಟ್ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ 'ಸಗಟು' ಎಂಬ ಅರ್ಥದಲ್ಲಿ ಬಳಕೆಯಾಗಿದೆ.

ಪ್ರಯೋಗ – 'ಸಗಟು ಮಾರಾಟಗಾರರು ಕೊನೆಯ ಹಂತಕ್ಕೆ ನಿಗದಿಪಡಿಸಲಾದ ಬೆಲೆ'. ಇಲ್ಲಿ ಸಗಟು ಎಂಬ ಪದವು ಒಟ್ಟು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಪ್ರಜಾವಾಣಿ, ಜೂ.೪)**

**ಸಿಸ್ಟಮ್** : (ನಾಮಪದ) ಇಂಗ್ಲೀಷ್ ಮೂಲದಿಂದ ಬಂದಿದ್ದು. ವ್ಯವಸ್ಥೆ, ಚೌಕಟ್ಟು, ರಚನೆ ಮುಂತಾದ ಅರ್ಥಗಳನ್ನು ಹೊಂದಿದೆ.

ಪ್ರಯೋಗ – 'ಫೋಟೋ ವೊಲ್ಟಾಯಿಕ್ ಸಿಸ್ಟಮ್ ಸೂರ್ಯನ ಬೆಳಕನ್ನು ನೇರವಾಗಿ ವಿದ್ಯುಚ್ಛಕ್ತಿಯನ್ನು ಪರಿವರ್ತಿಸುತ್ತದೆ'. ಇಲ್ಲಿ ವ್ಯವಸ್ಥೆ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. **(ಸಂಯುಕ್ತ ಕರ್ನಾಟಕ, ಜೂ.೪)**

**ಸುಪರ್ದು** : (ನಾಮಪದ) ಹಿಂದಿ ಮೂಲದಿಂದ ಬಂದಿದ್ದು, ಅಧೀನ, ವಶ, ಹಿಡಿತ, ಹತೋಟಿ ಎಂಬ ಅರ್ಥವನ್ನು ಹೊಂದಿದೆ. ಪಾರಸಿ, ಹಿಂದಿಯಲ್ಲಿ ಸುಪರ್ದ್ ಎಂದು ಬಳಕೆಯಾದರೆ, ಕನ್ನಡದಲ್ಲಿ ವ್ಯಂಜನಾಂತ್ಯ ಕಳೆದುಕೊಂಡು 'ಉ' ಕಾರಂತ್ಯವಾಗಿ ಅಂದರೆ 'ಸುಪರ್ದು' ಎಂದು ಬಳಕೆಯಾಗಿದೆ.

ಪ್ರಯೋಗ – 'ಹಣ ವಾಪಾಸ್ ಮಾಡಿ ಮನೆಯನ್ನು ತಮ್ಮ ಸುಪರ್ದಿಗೆ ಪಡೆಯಬಹುದು'. ಇಲ್ಲಿ ವಶ ಎಂಬ ಅರ್ಥದಲ್ಲಿ ಸುಪರ್ದು ಎಂಬ ಪದ ಪ್ರಯೋಗವಾಗಿದೆ.

ಅದೇ ರೀತಿಯಾಗಿ ಪ್ರಜಾವಾಣಿ ಪತ್ರಿಕೆಯ ವಾಣಿಜ್ಯ ಪುರವಣಿಯಲ್ಲಿ ಬಳಕೆಯಾದ ಇತರ ಅನ್ಯ ಭಾಷೆಯ ಪದಗಳು

೧) ಕಸುಬು

೨) ಕಾನೂನು

೩) ಕುರ್ಚಿ

೪) ಖರೀದಿ

೫) ನೌಕರ

೬) ಕಾರ್ಖಾನೆ

೭) ರವಾನೆ

೮) ವಸೂಲಿ

೯) ಕಾಯಂ

೧೦) ಖಾಲಿ

ಈ ಎಲ್ಲಾ ಪದಗಳು ಈಗಾಗಲೇ ಬೇರೆ-ಬೇರೆ ಪತ್ರಿಕೆಗಳ ವಿವಿಧ ಪುರವಣಿಗಳಲ್ಲಿ ಮೂಲ ಅರ್ಥ, ಪ್ರಯೋಗದ ದೃಷ್ಟಿಯಿಂದ ಚರ್ಚಿಸಲಾಗಿದೆ.

**ಅಡಿಟಿಪ್ಪಣಿ :**

೧. ಡಾ.ಕೆ.ವಿ.ನಾರಾಯಣ, ಸಂ.೬೨, ೨೦೦೬, **ನಮ್ಮ ಕನ್ನಡ,** ಕನ್ನಡ ಭಾಷೆ ಅಧ್ಯಯನ ವಿಭಾಗ, ಹಂಪಿ.

ವೈವಿಧ್ಯತೆ ಎಂದರೆ ಭಿನ್ನ-ಭಿನ್ನ ನೆಲೆಯಲ್ಲಿ ಅಥವಾ ವಿವಿಧ ರೀತಿಯಲ್ಲಿ ಅನ್ಯಭಾಷಾ ಪದಗಳು ಕನ್ನಡದಲ್ಲಿ ಬಳಕೆಯಾಗುವಾಗ ಹೇಗೆ ಬಳಕೆಯಾಗುತ್ತವೆ ಎಂಬುದನ್ನು ನೋಡುವುದು ಎಂದರ್ಥ. ಅನ್ಯಭಾಷೆಯ ಪದಗಳು ಮುಖ್ಯವಾಗಿ ಎರಡು ರೀತಿಯಲ್ಲಿ ಬಳಕೆಯಾಗುತ್ತವೆ. ಒಂದು ಆಡು ಭಾಷೆಯಲ್ಲಿನ ಬಳಕೆ, ಇನ್ನೊಂದು ಬರವಣಿಗೆಯಲ್ಲಿನ ಬಳಕೆ, ಸಾಮಾನ್ಯವಾಗಿ ಪತ್ರಿಕೆಯಲ್ಲಿ ಬಳಕೆಯಾಗುವ ಪದಗಳು ಬರವಣಿಗೆಯ ಪದಗಳೇ ಆಗಿರುವುದರಿಂದ ಅನ್ಯಭಾಷೆಯ ಪದಗಳು ಕನ್ನಡದ ಬರವಣಿಗೆಯಲ್ಲಿ ವಿವಿಧ ರೀತಿಯಲ್ಲಿ ಹೇಗೆ ಬಳಕೆಯಾಗುತ್ತವೆ ಎಂಬುದನ್ನು ಅಧ್ಯಯನದಲ್ಲಿ ನೋಡಲಾಗುತ್ತದೆ.

ಕನ್ನಡ ಭಾಷೆಯನ್ನು ಹೊರತು ಪಡಿಸಿ ಎಲ್ಲಾ ಭಾಷೆಯ ಪದಗಳು ಅನ್ಯಭಾಷೆಯ ಪದಗಳು ಎನಿಸಿಕೊಂಡರೂ ಪ್ರಮಾಣೀಕರಣಕ್ಕಾಗಿ ಸಂಸ್ಕೃತವನ್ನು ಅವಲಂಬಿಸಿದ್ದರಿಂದ ಪತ್ರಿಕೆಗಳಲ್ಲಿನ ಬರವಣಿಗೆಯ ಪದಗಳು ಬಹುತೇಕವಾಗಿ ಸಂಸ್ಕೃತವೇ ಆಗಿದ್ದರಿಂದ ಮತ್ತು ಪತ್ರಿಕೆಗಳಲ್ಲಿನ ಪದಗಳು ಕನ್ನಡ ಪದಗಳೇ ಅಥವಾ ಸಂಸ್ಕೃತ ಪದಗಳೇ ಎಂಬುದನ್ನು ಗುರುತಿಸಲು ಸಾಧ್ಯವಿಲ್ಲದಷ್ಟು ಮಟ್ಟಿಗೆ ಸಂಸ್ಕೃತಮಯವಾಗಿರುವುದರಿಂದ ಸಂಸ್ಕೃತ ಪದಗಳ ವೈವಿಧ್ಯತೆಯನ್ನು ಇಲ್ಲಿ ಪ್ರತ್ಯೇಕವಾಗಿ ಅಧ್ಯಯನ ಮಾಡದೇ ಅರೇಬ್ಬಿಕ್, ಪಾರಸಿ, ಹಿಂದಿ ಹಾಗೂ ಮರಾಠಿ, ಇಂಗ್ಲೀಷ್ ಪದಗಳು ಕನ್ನಡದಲ್ಲಿ ಬಳಕೆಯಾಗುವಾಗ ವಿವಿಧ ರೀತಿಯಲ್ಲಿ ಹೇಗೆ ಬಳಕೆಯಾಗುತ್ತವೆ ಎಂಬುದನ್ನು ಚರ್ಚಿಸುವುದು ಹೆಚ್ಚು ಸೂಕ್ತವೆನಿಸುತ್ತದೆ.

ಪತ್ರಿಕೆಯಲ್ಲಿ ಬಳಕೆಯಾಗುವ ಅನ್ಯಭಾಷೆ ಪದಗಳ ಬಳಕೆಯ ವೈವಿಧ್ಯತೆಯನ್ನು ಮುಖ್ಯವಾಗಿ ಎರಡು ನೆಲೆಗಳಲ್ಲಿ ನೋಡಬಹುದು.

**೧) ಬಳಕೆಯ ನೆಲೆಯಲ್ಲಿ**

**೨) ರಚನೆಯ ನೆಲೆಯಲ್ಲಿ**

## ಬಳಕೆ ನೆಲೆಯಲ್ಲಿ ವೈವಿಧ್ಯತೆ :

ಕನ್ನಡ ದಿನಪತ್ರಿಕೆಗಳಲ್ಲಿ ಬಳಕೆಯಾದ ಅನ್ಯ ಭಾಷೆಯ ಪದಗಳು ಬಳಕೆಯ ನೆಲೆಯಲ್ಲಿ ವೈವಿಧ್ಯತೆಯಿಂದ ಕೂಡಿರುತ್ತವೆ. ಪತ್ರಿಕೆಯಲ್ಲಿನ ಶೀರ್ಷಿಕೆ, ಸಂಪಾದಕೀಯ, ಕ್ರೀಡಾ ಪುರವಣಿ, ವಾಣಿಜ್ಯ ಪುರವಣಿ, ವ್ಯಂಗ್ಯಚಿತ್ರ, ವಾಚಕರವಾಣಿಯಲ್ಲಿ ಬಳಕೆಯಾಗುವ ಪದಗಳಲ್ಲಿ ವೈವಿಧ್ಯತೆ ಕಂಡು ಬರುತ್ತದೆ. ಸಂಪಾದಕೀಯ ಕಾಲಂನಲ್ಲಿ ಬಳಕೆಯಾದ ಭಾಷೆಗೂ, ವಿವಿಧ ಪುರವಣಿಗಳಲ್ಲಿ ಬಳಕೆಯಾಗುವ ಭಾಷೆಗೂ ಸಾಕಷ್ಟು ವೈವಿಧ್ಯತೆ ಕಂಡು ಬರುತ್ತದೆ. ಯಾವುದೇ ಪುರವಣಿಗಳ ಶೀರ್ಷಿಕೆ ಹೊರತು ಪಡಿಸಿ ಸುದ್ದಿಯನ್ನು ನೋಡಿದಾಗ ಅಲ್ಲಿ ಯಾವ ರೀತಿಯ ಭಾಷಾ ರಚನೆಯಾಗಿದೆ ಎಂಬುದನ್ನು ಗುರುತಿಸಬಹುದು. ಈ ಗುರುತಿಸುವಿಕೆಗೆ ಪದಗಳ ವೈವಿಧ್ಯತೆಯೇ ಕಾರಣವೆಂದು ಹೇಳಬಹುದು.

ಒಂದೇ ವಸ್ತುವಿನ ಅರ್ಥವನ್ನು ಹೊಂದಿರುವ ಪದಗಳು ಬೇರೆ-ಬೇರೆ ಪುರವಣಿಗಳಲ್ಲಿ ಬೇರೆ-ಬೇರೆ ರೀತಿಯಲ್ಲಿ ಬಳಕೆಯಾಗುತ್ತವೆ. ಉದಾಹರಣೆಗೆ ವಿವಾಹ ಎನ್ನುವ ಪದ ಸಂಪಾದಕೀಯ ಕಾಲಂನಲ್ಲಿ ಬಳಕೆಯಾದರೆ, ಸುದ್ದಿ ಮತ್ತು ಲೇಖನ ಹಾಗೂ ಅಂಕಣಗಳಲ್ಲಿ ಮದುವೆ ಎಂದು, ಪ್ರಾದೇಶಿಕ ವರದಿಗಳಲ್ಲಿ ಲಗ್ನ ಎಂದು ಬಳಕೆಯಾಗುವುದನ್ನು ಕಾಣಬಹುದು.

ಪತ್ರಿಕೆಯ ವಿವಿಧ ಪುರವಣಿಗಳಲ್ಲಿ ಬಳಕೆಯಾಗುವ ಅನ್ಯ ಭಾಷೆಯ ಪದಗಳು ಬಳಕೆ ನೆಲೆಯಲ್ಲಿ ಪುರವಣಿಯಿಂದ ಪುರವಣಿಗೆ ಭಿನ್ನವಾಗಿರುತ್ತವೆ. ಇಲ್ಲಿ ಬಳಕೆಯಾದ ಭಾಷಾ ಶೈಲಿಯೂ ಕೂಡ ಭಿನ್ನವಾಗಿರುತ್ತದೆ. ಉದಾಹರಣೆಗಾಗಿ ಕ್ರೈಂ ನ್ಯೂಸ್‌ನಲ್ಲಿ ಬಳಕೆಯಾದ ಭಾಷಾ ಶೈಲಿಗೂ, ಅಂಕಣಗಳಲ್ಲಿ, ಲೇಖನಗಳಲ್ಲಿ ಅಥವಾ ಸಾಮಾನ್ಯ ಸುದ್ದಿಗಳಲ್ಲಿ ಬಳಕೆಯಾಗುವ ಭಾಷಾ ಶೈಲಿಗೂ ಬಹಳಷ್ಟು ವ್ಯತ್ಯಾಸ ಕಂಡು ಬರುತ್ತದೆ.

ವಾಣಿಜ್ಯ ಪುರವಣಿ ಕ್ರೀಡಾ ಪುರವಣಿ ಹಾಗೂ ವ್ಯಂಗ್ಯಚಿತ್ರಗಳಲ್ಲಿ ಇಂಗ್ಲೀಷ್ ಭಾಷೆಯ ಪದಗಳು ಹೆಚ್ಚು ಬಳಕೆಯಾದರೆ, ಸಂಪಾದಕೀಯ, ಲೇಖನ, ಅಂಕಣ ಹಾಗೂ ಸಾಮಾನ್ಯ ಸುದ್ದಿಗಳಲ್ಲಿ ಸಂಸ್ಕೃತ ಪದಗಳು, ಜೊತೆಗೆ, ಅರೆಬ್ಬಿಕ್, ಪಾರಸಿ, ಹಿಂದಿ, ಮರಾಠಿ ಪದಗಳು ಕಂಡು ಬರುತ್ತವೆ.

## ರಚನೆ ನೆಲೆಯಲ್ಲಿ ವೈವಿಧ್ಯತೆ

ಅನ್ಯಭಾಷೆಯ ಪದಗಳು ಕನ್ನಡದಲ್ಲಿ ಬಳಕೆಯಾಗುವಾಗ ಕೆಲವು ಪದಗಳು ಯಥಾವತ್ತಾಗಿ, ಮತ್ತೆ ಕೆಲವು ಪದಗಳು ವ್ಯಂಜನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದಲ್ಲಿ ಬಳಕೆಯಾದರೆ, ಇನ್ನೂ ಕೆಲವು ಪದಗಳು ವ್ಯಂಜನಾಂತ್ಯವನ್ನು ಕಳೆದುಕೊಂಡು 'ಎ' ಕಾರಂತ್ಯವಾಗಿ, 'ಅ' ಕಾರಂತ್ಯವಾಗಿ ಬಳಕೆಯಾದರೆ, ಕೆಲವು ಪದಗಳು ದೀರ್ಘಾಂತ್ಯವನ್ನು ಕಳೆದುಕೊಂಡು ಹ್ರಸ್ವೀಕರಣವಾಗುತ್ತವೆ. ರಚನೆಯಲ್ಲಿ ಆಗುವ ವೈವಿಧ್ಯತೆಯನ್ನು ಕೆಲವು ನಿದರ್ಶನಗಳ ಮೂಲಕ ನೋಡಬಹುದು.

**ಇಲಾಖೆ** : ಅರೆಬ್ಬಿಕ್ ಮೂಲದಿಂದ ಬಂದಿದ್ದು. 'ಇಲಾಕಾ' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ದೀರ್ಘಾಂತ್ಯವನ್ನು ಕಳೆದುಕೊಂಡು 'ಎ' ಕಾರಂತ್ಯದೊಂದಿಗೆ ಖಾತೆ ಎಂದು ಬಳಕೆಯಾಗಿದೆ. **(ವಿಜಯಕರ್ನಾಟಕ, ಜೂ.೨)**

**ಕಛೇರಿ** : ಹಿಂದಿ ಮೂಲದಿಂದ ಬಂದಿದ್ದು. 'ಕಚಹರೀ' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ದೀಘಾಂತ್ಯವನ್ನು ಕಳೆದುಕೊಂದು ಹ್ರಸ್ವೀಕರಣದೊಂದಿಗೆ 'ಕಛೇರಿ' ಎಂದು ಬಳಕೆಯಾಗಿದೆ. **(ಸಂ.ಕರ್ನಾಟಕ, ಜೂ.೩)**

**ಕಿಸಾನ್** : ಹಿಂದಿ ಮೂಲದಿಂದ ಬಂದಿದ್ದು. 'ಕಿಸಾನ್' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ಯಥಾವತ್ತಾಗಿ ಕಿಸಾನ್ ಎಂದು ಬಳಕೆಯಲ್ಲಿದೆ. **(ಸಂಯುಕ್ತ ಕರ್ನಾಟಕ, ಜೂ.೩)**

**ಖದೀಮ** : ಅರೆಬ್ಬಿಕ್ ಮೂಲದಿಂದ ಬಂದಿದ್ದು. 'ಕದೀಮ್' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಅ' ಕಾರಂತ್ಯವಾಗಿ 'ಖದೀಮ' ಎಂದು ಬಳಕೆಯಲ್ಲಿದೆ. (**ಕನ್ನಡಪ್ರಭ, ಮೇ.೨೯**)

**ಖರೀದಿ** : ಮರಾಠಿ ಮೂಲದಿಂದ ಬಂದಿದ್ದು. 'ಖರೀದೀ' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ದೀರ್ಘಾಂತ್ಯವನ್ನು ಕಳೆದುಕೊಂಡು ಹೃಸ್ವೀಕರಣದೊಂದಿಗೆ 'ಖರೀದಿ' ಎಂದು ಬಳಕೆಯಾಗುತ್ತದೆ. (**ಕನ್ನಡಪ್ರಭ, ಮೇ.೧೮**)

**ಖಾತೆ** : ಹಿಂದಿ ಮೂಲದಿಂದ ಬಂದಿದ್ದು. 'ಖಾತಾ ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಎ' ಕಾರಂತ್ಯದೊಂದಿಗೆ ಖಾತೆ ಎಂದು ಬಳಕೆಯಾಗಿದೆ. (**ವಿಜಯ ಕರ್ನಾಟಕ, ಜೂ.೨**)

**ಖುಷಿ** : ಪಾರಸಿ ಮೂಲದಿಂದ ಬಂದಿದ್ದು. 'ಖುಶೀ' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ದೀರ್ಘಾಂತ್ಯವನ್ನು ಕಳೆದುಕೊಂಡು ಹೃಸ್ವೀಕರಣಗೊಂಡು ಖುಷಿ ಎಂದು ಬಳಕೆಯಲ್ಲಿದೆ. (**ಪ್ರಜಾವಾಣಿ, ಮೇ.೨೩**)

**ಚಹರೆ** : ಮರಾಠಿ ಮೂಲದಿಂದ ಬಂದಿದ್ದು. 'ಚೆಹ್ರಾ' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ದೀರ್ಘಾಂತ್ಯವನ್ನು ಕಳೆದುಕೊಂಡು 'ಎ' ಕಾರಂತ್ಯದೊಂದಿಗೆ ಚಹರೆ ಎಂದು ಬಳಕೆಯಾಗಿದೆ. (**ಕನ್ನಡಪ್ರಭ, ಮೇ.೧೭**)

**ಜೈಲು** : ಇಂಗ್ಲೀಷ್ ಮೂಲದಿಂದ ಬಂದಿದ್ದು. ಇಂಗ್ಲೀಷ್‌ನಲ್ಲಿ "Jail' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ 'ನೋಟು' ಎಂದು ಬಳಕೆಯಾಗಿದೆ. (**ವಿಜಯಕರ್ನಾಟಕ, ಜೂ.೧**)

**ಟಿಕೇಟ್** : ಇಂಗ್ಲೀಷ್ ಮೂಲದಿಂದ ಬಂದಿದ್ದು. ಇಂಗ್ಲೀಷ್‌ನಲ್ಲಿ 'Ticket' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ಟಿಕೇಟ್ ಎಂದು ಯಥಾವತ್ತಾಗಿ ಬಳಕೆಯಾಗಿದೆ. (**ಉದಯವಾಣಿ, ಜೂ.೩.**)

**ತಂಬಾಕು** : ಹಿಂದಿ ಮೂಲದಿಂದ ಬಂದಿದ್ದು. 'ತಂಬಾಕೂ' ಎಂದು ಬಳಕೆಯಾಗಿದ್ದು, ಕನ್ನಡಕ್ಕೆ ಬರುವಾಗ ದೀರ್ಘಾಂತ್ಯವನ್ನು ಕಳೆದುಕೊಂಡು ಹೃಸ್ವೀಕರಣದೊಂದಿಗೆ ತಂಬಾಕು ಎಂದು ಬಳಕೆಯಲ್ಲಿದೆ. (**ಸಂಯುಕ್ತ ಕರ್ನಾಟಕ, ಜೂ.೪**)

**ತರಾಟೆ** : ಮರಾಠಿ ಮೂಲದಿಂದ ಬಂದಿದ್ದು. 'ತರಾಟಾ' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ದೀರ್ಘಾಂತ್ಯವನ್ನು ಕಳೆದುಕೊಂಡು 'ಎ' ಕಾರಂತ್ಯದೊಂದಿಗೆ 'ತರಾಟೆ' ಎಂದು ಬಳಕೆಯಲ್ಲಿದೆ. (**ಕನ್ನಡಪ್ರಭ, ಮೇ.೨೩**)

**ದರ್ಬಾರು :** ಪಾರಸಿ ಮೂಲದಿಂದ ಬಂದಿದ್ದು. 'ದರ್ಬಾರ್' ಎಂದು ಬಳಕೆಯಲ್ಲಿದ್ದರೆ, ಕನ್ನಡಕ್ಕೆ ಬರುವಾಗ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯವಾಗಿ ಬಳಕೆಯಾಗಿದೆ. **(ಪ್ರಜಾವಾಣಿ, ಮೇ.೭)**

**ದುಂಬಾಲು:** ಪಾರಸಿ ಮೂಲದಿಂದ ಬಂದಿದ್ದು. ಪಾರಸಿಯಲ್ಲಿ 'ದುಂಬಾಲಾ' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ದೀರ್ಘಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯವಾಗಿ ಬಳಕೆಯಾಗಿದೆ. **(ಪ್ರಜಾವಾಣಿ, ಮೇ.೧೪)**

**ದುಬಾರಿ :** ಪಾರಸಿ ಮೂಲದಿಂದ ಬಂದಿದ್ದು. 'ದುಬಾರಾ' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ದೀರ್ಘಾಂತ್ಯವನ್ನು ಕಳೆದುಕೊಂಡು 'ಇ' ಕಾರಂತ್ಯದೊಂದಿಗೆ 'ಉ' ಕಾರಂತ್ಯವಾಗಿ ಬಳಕೆಯಾಗಿದೆ. **(ಪ್ರಜಾವಾಣಿ, ಮೇ.೧೪)**

**ದೇಣಿಗೆ :** ಮರಾಠಿ ಮೂಲದಿಂದ ಬಂದಿದ್ದು. ದೇಣಗೀ, ದೇನಗೀ ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ದೀರ್ಘಾಂತ್ಯವನ್ನು ಕಳೆದುಕೊಂಡು 'ಎ' ಕಾರಂತ್ಯದೊಂದಿಗೆ 'ದೇಣಿಗೆ' ಎಂದು ಬಳಕೆಯಾಗಿದೆ. **(ವಿಜಯಕರ್ನಾಟಕ, ಜೂ.೭)**

**ನೋಟು :** ಇಂಗ್ಲೀಷ್ ಮೂಲದಿಂದ ಬಂದಿದ್ದು. ಇಂಗ್ಲೀಷ್‌ನಲ್ಲಿ 'Note' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ 'ನೋಟು' ಎಂದು ಬಳಕೆಯಾಗಿದೆ. **(ವಿಜಯ ಕರ್ನಾಟಕ, ಜೂ.೧)**

**ಪರೇಡ್ :** ಇಂಗ್ಲೀಷ್ ಮೂಲದಿಂದ ಬಂದಿದ್ದು. ಇಂಗ್ಲೀಷ್‌ನಲ್ಲಿ 'Parade' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ಯಥಾವತ್ತಾಗಿ 'ಪರೇಡ್' ಎಂದು ಬಳಕೆಯಾಗಿದೆ. ಇನ್ನೂ ಕೆಲವೊಂದು ಬಾರಿ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ 'ಪರೇಡು' ಎಂದು ಬಳಕೆಯಾಗುತ್ತದೆ. **(ವಿಜಯ ಕರ್ನಾಟಕ, ಜೂ.೧)**

**ಪಾವತೀ :** ಹಿಂದಿ ಮೂಲದಿಂದ ಬಂದಿದ್ದು. 'ಪಾವತೀ' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ದೀರ್ಘಾಂತ್ಯವನನು ಕಳೆದುಕೊಂಡು ಹ್ರಸ್ವೀಕರಣಗೊಂಡು 'ಪಾವತಿ' ಎಂದು ಬಳಕೆಯಲ್ಲಿದೆ. **(ಪ್ರಜಾವಾಣಿ, ಮೇ.೨೭)**

**ಪೋರ :** ಮರಾಠಿ ಮೂಲದಿಂದ ಬಂದಿದ್ದು. 'ಪೋರ' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ಯಥಾವತ್ತಾಗಿ ಪೋರಾ ಎಂದು ಬಳಕೆಯಲ್ಲಿದೆ. **(ಕನ್ನಡಪ್ರಭ, ಮೇ.೧೭)**

**ಬಂದ್** : ಹಿಂದಿ ಮೂಲದಿಂದ ಬಂದಿದ್ದು. 'ಬಂದ್' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ಯಥಾವತ್ತಾಗಿ ಬಂದ್ ಎಂದು ಬಳಕೆಯಲ್ಲಿದೆ. **(ಕನ್ನಡಪ್ರಭ, ಮೇ.೧೮)**

**ರವಾನೆ** : ಪಾರಸಿ ಮೂಲದಿಂದ ಬಂದಿದ್ದು. 'ರವಾನಾ' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ದೀರ್ಘಾಂತ್ಯವನ್ನು ಕಳೆದುಕೊಂಡು 'ಎ' ಕಾರಂತ್ಯವಾಗಿ ರವಾನೆ ಎಂದು ಬಳಕೆಯಾಗಿದೆ. **(ಪ್ರಜಾವಾಣಿ, ಮೇ.೧೬)**

**ಲಾರಿ** : ಇಂಗ್ಲೀಷ್ ಮೂಲದಿಂದ ಬಂದಿದ್ದು. ಇಂಗ್ಲೀಷ್‌ನಲ್ಲಿ 'Lorry' ಎಂದು ಬಳಕೆಯಲ್ಲಿದೆ. ಕನ್ನಡಕ್ಕೆ ಬರುವಾಗ ಯಥಾವತ್ತಾಗಿ 'ಲಾರಿ' ಎಂದು ಬಳಕೆಯಾಗಿದೆ. **(ಉದಯವಾಣಿ, ಜೂ.೧)**

**ವಕೀಲ** : ಅರೆಬ್ಬಿಕ್ ಮೂಲದಿಂದ ಬಂದಿದ್ದು. ಅರೆಬ್ಬಿಕ್‌ನಲ್ಲಿ 'ವಕೀಲ್' ಎಂದು ಬಳಕೆಯಲ್ಲಿದೆ. ಕನ್ನಡಕ್ಕೆ ಬರುವಾಗ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಅ' ಕಾರಂತ್ಯದೊಂದಿಗೆ 'ವಕೀಲ' ಎಂದು ಬಳಕೆಯಾಗಿದೆ. **(ಸಂಯುಕ್ತ ಕರ್ನಾಟಕ. ಜೂ.೬)**

**ಸರ್ಕಾರ** : ಹಿಂದಿ ಮೂಲದಿಂದ ಬಂದಿದ್ದು. ಸರ್ಕಾರ್, ಸರಕಾರ್ ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಅ' ಕಾರಂತ್ಯದೊಂದಿಗೆ 'ಸರ್ಕಾರ' ಎಂದು ಬಳಕೆಯಾಗಿದೆ. **(ಕನ್ನಡಪ್ರಭ, ಮೇ.೨೩)**

**ಸವಾರಿ** : ಪಾರಸಿ ಮೂಲದಿಂದ ಬಂದಿದ್ದು. 'ಸುವಾರೀ' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ದೀರ್ಘಾಂತ್ಯವನ್ನು ಕಳೆದುಕೊಂಡು ಹೃಸ್ವೀಕರಣದೊಂದಿಗೆ ಸವಾರಿ ಎಂದು ಬಳಕೆಯಾಗಿದೆ. **(ವಿಜಯ ಕರ್ನಾಟಕ, ಜೂ.೪)**

**ಹರಕತ್ತು** : ಅರೆಬ್ಬಿಕ್ ಮೂಲದಿಂದ ಬಂದಿದ್ದು. 'ಹರಕತ್' ಎಂದು ಬಳಕೆಯಲ್ಲಿದ್ದು, ಕನ್ನಡಕ್ಕೆ ಬರುವಾಗ ವ್ಯಂಜನಾಂತ್ಯವನ್ನು ಕಳೆದುಕೊಂಡು 'ಉ' ಕಾರಂತ್ಯದೊಂದಿಗೆ 'ಹರಕತ್ತು' ಎಂದು ಬಳಕೆಯಾಗಿದೆ. **(ವಿಜಯ ಕರ್ನಾಟಕ, ಜೂ.೫)**

**ಹಾಜರ್** : ಅರೆಬ್ಬಿಕ್ ಮೂಲದಿಂದ ಬಂದಿದ್ದು, 'ಹಾಝಿರ್' ಎಂದು ಬಳಕೆಯಾಗಿದ್ದು, ಕನ್ನಡಕ್ಕೆ ಬರುವಾಗ ಯಥಾವತ್ತಾಗಿ ಬಳಕೆಯಾಗಿದೆ. **(ಕನ್ನಡಪ್ರಭ, ಮೇ.೧೭)**

ಹೀಗೆ ಕನ್ನಡ ದಿನಪತ್ರಿಕೆಗಳಲ್ಲಿ ಬಳಕೆಯಾಗುವ ಅನ್ಯಭಾಷಾ ಪದಗಳು (ಸಂಸ್ಕೃತವನ್ನು ಹೊರತು ಪಡಿಸಿ) ಕನ್ನಡಕ್ಕೆ ಬರುವಾಗ ಮುಖ್ಯವಾಗಿ ಬಳಕೆಯ ಮತ್ತು ರಚನೆ ಈ ಎರಡು ನೆಲೆಯಲ್ಲಿ ವೈವಿಧ್ಯತೆ ಕಂಡು ಬರುತ್ತದೆ.

ಒಬ್ಬ ಭಾಷಿಕನಲ್ಲಿ ಪದಕೋಶ ಹೇಗೆ ನೆಲೆಗೊಂಡಿರುತ್ತದೆ ಎಂಬುದನ್ನು ಖಚಿತವಾಗಿ ಹೇಳಲಾಗದು. ಅಂತೆಯೇ ನೆಲೆಗೊಂಡಿರುವ ಪದಕೋಶ ಹೇಗೆ ಬಳಕೆಯಾಗುತ್ತದೆ ಎಂಬುದನ್ನು ಹೇಳಲೂ ಸಾಧ್ಯವಿಲ್ಲ. ಸಾಮಾನ್ಯ ತಿಳುವಳಿಕೆಯ ಪ್ರಕಾರ ಭಾಷಿಕನ ಮೆದುಳಿನಲ್ಲಿ ಪದಕೋಶ ಮುದ್ರಿತವಾಗಿರುತ್ತದೆ. ತನಗೆ ಬೇಕಾದಾಗ ಆ ಪದವನ್ನು ಆಯ್ಕೆ ಮಾಡಿಕೊಂಡು ಭಾಷಿಕ ಬಳಸುತ್ತಾನೆ. ಹೀಗೆ ಬಳಕೆ ಮಾಡುವಾಗ ಪದದ ರೂಪ ಮತ್ತು ಅರ್ಥಗಳು ಸೂಕ್ತ ಸಂಯೋಜನೆಗೆ ಒಳಪಡದ ಹತ್ತಾರು ಸಂದರ್ಭಗಳು ಭಾಷಿಕನ ನಿತ್ಯಜೀವನದಲ್ಲಿ ಒದಗುತ್ತವೆ. ಕೆಲವೊಂದು ಬಾರಿ ಅರ್ಥ ಗ್ರಹಿಕೆಗೆ ಬಂದು, ಅದನ್ನು ಪ್ರತಿನಿಧಿಸುವ ಧ್ವನಿರೂಪಕ್ಕಾಗಿ ತಡಕಾಡುವುದು ಉಂಟು. ಇನ್ನೂ ಕೆಲವು ಬಾರಿ ಧ್ವನಿ ರೂಪಗಳು ಅರ್ಥ ಗ್ರಹಿಕೆಯಿಲ್ಲದೆ ನೆನಪಿಗೆ ಬರುವುದು ಉಂಟು.

ಮಾನಸಿಕ ನೆಲೆಯಿಂದ ಪದಕೋಶದ ರಚನೆಯನ್ನು ವಿವರಿಸುವುದಕ್ಕಿಂತ ಬಳಕೆಯಾಗುವ ಕ್ರಮವನ್ನು ಆಧರಿಸಿ ವಿವರಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ಓದುವಾಗ, ಮಾತನ್ನು ಆಲಿಸುವಾಗ, ಮಾತನಾಡುವಾಗ ಮತ್ತು ಬರೆಯುವಾಗ ಈ ನಾಲ್ಕು ವಲಯಗಳಲ್ಲಿ ಪದಗಳು ಬಳಕೆಯಾಗುತ್ತವೆ ಮತ್ತು ಮುಖಾಮುಖಿಯಾಗುತ್ತವೆ. ಹೀಗೆ ಮುಖಾಮುಖಿಯಾಗುವ ಪದಗಳನ್ನು ಎಲ್ಲಾ ಸಂದರ್ಭಗಳಲ್ಲಿ ಒಂದೇ ರೀತಿ ಬಳಸುವುದಿಲ್ಲ. ನಾವು ಮಾತನಾಡುವ ಅದೆಷ್ಟೋ ಪದಗಳನ್ನು ಬರೆಯುವುದಿಲ್ಲ. ಬರೆದು ಓದಿದ ಅದೆಷ್ಟೋ ಪದಗಳನ್ನು ಮಾತನಾಡುವಾಗ ಬಳಸುವುದಿಲ್ಲ. ಅಂದರೆ ಪದಕೋಶದಲ್ಲಿ ಮುಖ್ಯವಾಗಿ ಕ್ರಿಯಾತ್ಮಕ ಪದಕೋಶ ಮತ್ತು ನಿಷ್ಕ್ರಿಯಾತ್ಮಕ ಪದಕೋಶ ಎಂದು ಎರಡು ಬಗೆಗಳನ್ನು ಕಾಣಬಹುದು. ಒಬ್ಬ ಭಾಷಿಕ ಸ್ವತಃ ತಾನೇ ಬಳಸುವ ಪದಕೋಶವನ್ನು ಕ್ರಿಯಾತ್ಮಕ ಪದಕೋಶವೆಂದು, ತಾನು ಬಳಸದಿದ್ದರೂ ಇತರ ಮೂಲಗಳಿಂದ ಬಳಕೆಯಾದಾಗ ಗ್ರಹಿಕೆಗೆ ಒದಗುವ ಪದಕೋಶ ನಿಷ್ಕ್ರಿಯಾತ್ಮಕ ಪದಕೋಶ ಎಂದು ಅರ್ಥೈಯಿಸಲಾಗುತ್ತದೆ. ಕೆಲವೊಮ್ಮೆ ನಿಷ್ಕ್ರಿಯಾತ್ಮಕ ಪದಗಳು ಕ್ರಿಯಾತ್ಮ ಪದಕೋಶದಲ್ಲಿ ಬಂದು ಸೇರಿಕೊಳ್ಳುತ್ತವೆ. ಈ ಪ್ರಕ್ರಿಯೆಯ ಹಿಂದೆ ಸಾಮಾಜಿಕ ಸಂಗತಿಗಳು ಬಲವಾಗಿ ಕೆಲಸ ಮಾಡುತ್ತವೆ. ಇದನ್ನು ನಾವು ಪದಕೋಶದ ಆಂತರಿಕ ಚಲನೆ ಎಂದು ಹೇಳಬಹುದು.

ಪ್ರಾಚೀನರು ಕನ್ನಡ ಪದಕೋಶವನ್ನು ದೇಶ್ಯ ಮತ್ತು ಅನ್ಯದೇಶ್ಯ ಎಂದು ಎರಡು ಗುಂಪುಗಳಾಗಿ ವಿಂಗಡಿಸಿದ್ದಾರೆ. ತತ್ಸಮಗಳು, ಸಮಸಂಸ್ಕೃತಿಗಳು ಅನ್ಯದೇಶ್ಯ ಗುಂಪಿನಲ್ಲಿ ಕಂಡು ಬರುವುದರ ಜೊತೆಜೊತೆಗೆ ಧ್ವನಿ ನಿಯಮಗಳಿಗೆ ಹೊಂದಿಕೊಂಡ ತದ್ಭವಗಳೂ ಕೂಡ ಕಾಣಿಸಿಕೊಂಡವು. ಈ ತದ್ಭವಗಳಲ್ಲಿ ಕೆಲವನ್ನು ಕನ್ನಡವೇ ರೂಪಿಸಿಕೊಂಡಿದ್ದರೆ, ಮತ್ತೆ ಕೆಲವು ಪ್ರಾಕೃತದಿಂದ ಕನ್ನಡಕ್ಕೆ ಬಂದಿವೆ.

ಅನ್ಯದೇಶ ಪದಕೋಶದ ಸ್ವರೂಪ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದಿದೆ. ಪರ್ಷಿಯ, ಅರಬ್ಬಿಕ್ ಮೂಲದ ಪದಗಳು ನೇರವಾಗಿ ಅಥವಾ ಬೇರೆ ಭಾಷೆಗಳ ಮೂಲಕ

ಬಂದು ಸೇರಿವೆ. ಅಲ್ಲದೆ ನೆರೆಯ ದ್ರಾವಿಡ ಭಾಷೆಗಳಿಂದ, ಇನ್ನಿತರ ಇಂಡೋ ಆರ್ಯನ್ ಭಾಷೆಗಳಿಂದ ಅದರಲ್ಲಿ ಮುಖ್ಯವಾಗಿ ಹಿಂದಿ, ಪೋರ್ಚುಗೀಸ್, ಟರ್ಕಿ ಭಾಷೆಗಳಿಂದ ಪದಗಳು ಬಂದು ಸೇರಿಕೊಂಡಿವೆ. ಅನ್ಯದೇಶ್ಯ ಪದಕೋಶದ ವ್ಯಾಪ್ತಿ ವಿಶಾಲವಾದಂತೆ ದೇಶ್ಯ ಪದಕೋಶದ ವ್ಯಾಪ್ತಿ ಸಂಕುಚಿತಗೊಳ್ಳುತ್ತದೆ. ಒಂದು ಭಾಷೆಯ ಪದಕೋಶದಲ್ಲಿ ಕೊರತೆಯನ್ನು ತುಂಬಲು ಅನ್ಯದೇಶ್ಯ ಪದಗಳ ಬಳಕೆ ಅಗತ್ಯವೆನಿಸಿದರೂ, ಎಲ್ಲಾ ಸಂದರ್ಭಗಳಲ್ಲಿ ಇದನ್ನು ಒಪ್ಪುವಂತಿಲ್ಲ. ಉದಾ : ಕನ್ನಡ ಪದಕೋಶದಲ್ಲಿ 'ಮೈ' ಪದವಿದ್ದರೂ 'ದೇಹ' ಎಂಬ ಪದ ಬಂದು ಸೇರಿದೆ. ಅದೇ ರೀತಿಯಾಗಿ 'ಗಂಡು – ಹೆಣ್ಣು' ಪದಗಳಿದ್ದರೂ 'ವಧು–ವರ' ಎಂಬ ಪದಗಳು ಬಂದು ಸೇರಿವೆ. ಈ ಸೇರುವಿಕೆಯ ಪ್ರಕ್ರಿಯೆ ನಡೆದಾಗ ಮೊದಲು ಇದ್ದ ಪದದ ಅರ್ಥ ಹಾಗೂ ಬಳಕೆಯ ವಿಧಾನಗಳು ಬದಲಾಗುತ್ತವೆ. ಉದಾ : 'ರಸ್ತೆ, ರೋಡು, ಬೀದಿಗಳು ಎಂಬ ಪದಗಳು ಬಂದು ಸೇರಿದಾಗ 'ಹಾದಿ, ದಾರಿ' ಎಂಬ ಪದಗಳು ಕೇವಲ ಸೀಮಿತ ವ್ಯಾಪ್ತಿಯಲ್ಲಿ ಬಳಕೆಯಾಗುವುದನ್ನು ಕಾಣಬಹುದು. ಈ ಪ್ರಕ್ರಿಯೆಯನ್ನು **'ಪದಕೋಶ ಪಲ್ಲಟ'** ಎಂದು ಕರೆಯಲಾಗುತ್ತದೆ.

ಪ್ರತಿಯೊಂದು ಭಾಷೆಯೂ ತನ್ನದೇಯಾದ ಪದಕೋಶವನ್ನು ಹೊಂದಿರುವಂತೆ ಭಾಷಾ ರಚನೆಯ ನಿಯಮಗಳನ್ನು ಹೊಂದಿರುತ್ತದೆ. ಈ ನಿಯಮಗಳನ್ನು ಮತ್ತು ಆಕೃತಿಗಳನ್ನು ಬಳಸುವುದರ ಮೂಲಕ ಪದಗಳನ್ನು ರಚಿಸಲಾಗುತ್ತದೆ. ಉದಾಹರಣೆಗೆ : 'ಸಿರಿ' ಮತ್ತು 'ತನ' ಎಂಬ ಆಕೃತಿಗಳನ್ನು ಬಳಸಿ 'ಸಿರಿತನ' ಎಂಬ ಪದ ರಚನೆಯಾಗಿದೆ. ಅಲ್ಲದೆ ಸಣ್ಣ, ದೊಡ್ಡ, ಬಡ, ಒಳ್ಳೆಯ, ಹಿರಿ, ದುಡುಕು, ಸಿಡುಕು, ಜಿಪುಣ ಎಂಬ ಪದಗಳು 'ತನ' ಎಂಬ ಆಕೃತಿಯನ್ನು ಬಳಸಿಕೊಳ್ಳುವುದರಿಂದ ಸಣ್ಣತನ, ದೊಡ್ಡತನ, ಬಡತನ, ಒಳ್ಳೆಯತನ, ಹಿರಿತನ, ದುಡುಕುತನ, ಸಿಡುಕುತನ, ಜಿಪುಣತನ ಎಂಬ ಪದಗಳು ರಚನೆಯಾಗುತ್ತವೆ.

ಕನ್ನಡ ಪದಕೋಶ ಹೊಸ ರೂಪಗಳಿಗಾಗಿ ಮುಖ್ಯವಾಗಿ ಇಂಗ್ಲೀಷ್ ಮತ್ತು ಸಂಸ್ಕೃತ ಭಾಷೆಗಳನ್ನು ಅವಲಂಬಿಸಿದೆ. ಈ ಅವಲಂಬನೆಗೆ ಅಥವಾ ಒಂದು ಭಾಷೆಯ ಪದಕೋಶಕ್ಕೆ ಅನ್ಯಭಾಷಾ ಪದಗಳು ಬರುವುದು ಭಾಷಾ ಸಂಪರ್ಕವೇ ಪ್ರಮುಖ ಕಾರಣವಾಗಿದೆ. ಹಿಂದೆ ಕನ್ನಡ ಮತ್ತು ಸಂಸ್ಕೃತ ಭಾಷೆಗಳ ಸಂಬಂಧವನ್ನು ಭಾಷಾ ಸಂಪರ್ಕವೆಂದು ಹೇಳಬಹುದಿತ್ತು. ಆದರೆ ಈಗ ಈ ಎರಡು ಭಾಷೆಗಳ ಸಂಬಂಧವನ್ನು ಸಂಪರ್ಕ ಎಂದು ಹೇಳುವ ಹಾಗಿಲ್ಲ. ಸಾವಿರಾರು ವರ್ಷಗಳ ಹಿಂದಿನ ಪರಿಸ್ಥಿತಿ ಈಗ ಉಳಿದಿಲ್ಲ. ಏಕೆಂದರೆ ಸಂಸ್ಕೃತ ಭಾಷಿಕರಾಗಲಿ, ಸಂಸ್ಕೃತವನ್ನು ರಾಜಕೀಯ ಮಾಧ್ಯಮವನ್ನಾಗಿ ಮಾಡಿದ ಅಧಿಕಾರ ಕೇಂದ್ರಗಳಾಗಲೀ, ಧಾರ್ಮಿಕ ಸಂಸ್ಥೆಗಳಾಗಲೀ ಈಗ ಇರದಿದ್ದರೂ ಕೂಡ ಕನ್ನಡ ಸಂಸ್ಕೃತ ಪದಗಳನ್ನೇ ಹೆಚ್ಚಾಗಿ ರೂಪಿಸುತ್ತದೆ. ತನ್ಮೂಲಕ ಪದಕೋಶವನ್ನು

ವೃದ್ಧಿಗಳಿಸುತ್ತಿದೆ. ಈ ಎರಡು ಭಾಷೆಗಳ ನಡುವೆ ಸಂಪರ್ಕ ಇರದಿದ್ದರೂ, ಕನ್ನಡ ಪದಕೋಶದಲ್ಲಿ ಸಂಸ್ಕೃತ ಪದಗಳು ಸೇರುತ್ತವೆ. ವಾಸ್ತವಿಕವಾಗಿ ಕನ್ನಡ ಇತ್ತೀಚಿನ ದಶಕಗಳಲ್ಲಿ ಸಂಸ್ಕೃತದಿಂದ ಪದಗಳನ್ನು ಸ್ವೀಕರಿಸುತ್ತಿಲ್ಲ. ಆದರೆ ಈಗಾಗಲೇ ಸ್ವೀಕರಿಸಿದ ಪದರೂಪಗಳು ಹಾಗೂ ನಿಯಮಗಳನ್ನು ಬಳಸಿಕೊಂಡು ತಾನೇ ಹೊಸ ರೂಪಗಳನ್ನು ರಚಿಸಿಕೊಳ್ಳುತ್ತಿದೆ. ಈ ರೂಪಗಳು ಹೆಸರಿಗೆ ಮಾತ್ರ ಸಂಸ್ಕೃತದ್ದವು. ಆದರೆ ಅವುಗಳ ರಚನೆ ಹಾಗೂ ಬಳಕೆಯ ಹೊಣೆ ಕನ್ನಡದ್ದು.

ಕನ್ನಡ ಸಂಸ್ಕೃತ ರೂಪಗಳನ್ನು ತಾನೇ ರೂಪಿಸಿಕೊಳ್ಳುವುದರ ಜೊತೆಗೆ ಅನ್ಯಭಾಷೆಗಳ ಮೂಲಕವೂ ಪಡೆದುಕೊಳ್ಳುತ್ತಿದೆ. ಅದರಲ್ಲೂ ಹಿಂದಿಯಿಂದ ಇಂಥ ಪದರಾಶಿಗಳು ಕನ್ನಡಕ್ಕೆ ದಾಳಿಯಿಡುತ್ತಿವೆ. ಉದಾ : 'ವಿಪಕ್ಷ' ಎಂಬ ಪದವು ಸಂಸ್ಕೃತ ಮೂಲದ್ದಾದರೂ ಕನ್ನಡ ಈ ಪದವನ್ನು ಹಿಂದಿಯ ಮೂಲಕ ಪಡೆದುಕೊಂಡಿದೆ. 'ಸೆಕ್ರೆಟರಿ ಮತ್ತು ಮಿನಿಸ್ಟರ್' ಎಂಬ ಪದಗಳಿಗೆ 'ಕಾರ್ಯದರ್ಶಿ, ಸಚಿವ (ಮಂತ್ರಿ) ಎಂಬ ರೂಪಗಳನ್ನು ಕನ್ನಡ ಪಡೆದುಕೊಂಡಿದೆ. ಆದರೆ ಇದೇ ರೂಪಗಳನ್ನು ಹಿಂದಿ ಪಡೆಯುವುದರ ಮೂಲಕ ಕನ್ನಡಕ್ಕೆ ಪ್ರವೇಶ ಪಡೆದಿದೆ. ಹೀಗೆ ಸಂಸ್ಕೃತ ರೂಪಗಳು ಹಿಂದಿಯ ಮೂಲಕ ಕನ್ನಡಕ್ಕೆ ಬರಲು ಪ್ರಮುಖ ಕಾರಣ ಸಂಪರ್ಕ ಮಾಧ್ಯಮ ಹಾಗೂ ಆಡಳಿತ ಕಾರಣವೆಂದು ಹೇಳಬಹುದು. ಅಂದರೆ ಸಂಸ್ಕೃತ ನಿಯಮವನ್ನು ಬಳಸಿ ಕನ್ನಡವೇ ಪದಗಳನ್ನು ರೂಪಿಸುವ ಪ್ರಕ್ರಿಯೆ ಹಾಗೂ ಅನ್ಯ ಭಾಷೆಯ ಮೂಲಕ ಸಂಸ್ಕೃತ ರೂಪಗಳನ್ನು ಪಡೆಯುವ ಪ್ರಕ್ರಿಯೆ ಇವೆರಡು ಮುಖಾಮುಖಿಯಾಗಿವೆ.

ಭಾಷಾ ಸಂಪರ್ಕದ ಪರಿಣಾಮದಿಂದಾಗಿ ಕನ್ನಡ ಪದಕೋಶಕ್ಕೆ ಇಂಗ್ಲೀಷ್ ಪದಗಳು ಬಂದು ಸೇರಿಕೊಳ್ಳುತ್ತಿವೆ. ಹೀಗೆ ಸೇರಿಕೊಳ್ಳುವಾಗ ಯಥಾವತ್ತಾಗಿ ಸೇರುವ ಪ್ರಕ್ರಿಯೇ ತೀವ್ರವಾಗಿದೆ. ಬಂದು ಸೇರಿದ ಪದಗಳನ್ನು ಕನ್ನಡ ತನ್ನ ಪದಕೋಶದಲ್ಲಿ ಇರಿಸಿಕೊಳ್ಳುತ್ತಿದೆ.

ಕನ್ನಡ ಪದಕೋಶಕ್ಕೆ ಇಂಗ್ಲೀಷ್ ಪದಗಳು ಬಂದು ಸೇರುವಾಗ ಇಂಗ್ಲೀಷ್‌ನ ಯಾವ ನಿಯಮ ಬಳಕೆಯಾಗುತ್ತದೆ ಎಂಬುದರ ಬಗ್ಗೆ ಸಾಕಷ್ಟು ಗೊಂದಲಗಳಿವೆ. ನುಡಿ ಬೆರಕೆಯ ಒಂದು ಸಂದರ್ಭವನ್ನು ಉದಾಹರಣೆಯಾಗಿ ನೋಡಬಹುದು. 'ಅವನು ವಾಕ್ ಮಾಡುತ್ತಾನೆ, ಅವನು ವಾಕಿಂಗ್ ಮಾಡುತ್ತಾನೆ' ಎಂಬ ನುಡಿ ಬೆರಕೆಯ ಎರಡು ವಾಕ್ಯಗಳಲ್ಲಿ ಮೊದಲನೆ ವಾಕ್ಯದಲ್ಲಿ 'ವಾಕ್' ಎಂಬ ಇಂಗ್ಲೀಷ್‌ನ ಕ್ರಿಯಾಪದಕ್ಕೆ 'ಮಾಡು' ಎಂಬ ಸಹಾಯಕ ಕ್ರಿಯಾಪದ ಬಳಕೆಯಾಗಿದೆ. ಅದೇ ರೀತಿಯಾಗಿ ಎರಡನೆ ವಾಕ್ಯದಲ್ಲಿ 'ವಾಕ್' ಪದದ ಕ್ರಿಯಾನಾಮ ರೂಪ ಡ್ರೈವಿಂಗ್ ಅನ್ನು ಆಯ್ಕೆ ಮಾಡಿಕೊಂಡು 'ಮಾಡು' ಎಂಬ ಸಹಾಯಕ ಕ್ರಿಯಾಪದವನ್ನು ಬಳಸಲಾಗಿದೆ.

ಆಧುನೀಕರಣವನ್ನು ದೃಷ್ಟಿಯಲ್ಲಿಟ್ಟುಕೊಂಡು ಕನ್ನಡ ಪದಕೋಶವನ್ನು ನೋಡಲಾಗಿ ಆಧುನೀಕರಣದಿಂದ ಕನ್ನಡ ಪದಕೋಶ ವಿಸ್ತಾರವಾಗುತ್ತದೆ. ಸೂಕ್ತವಾದ ಸಂವಹನ ಕ್ರಿಯೆ ಹಾಗೂ ಸೌಲಭ್ಯ ಆಧುನೀಕರಣದ ಮಾನದಂಡಗಳಾಗುತ್ತವೆ ನಿಜ. ಆದರೆ ಯಾವುದು ಸೂಕ್ತವಾದ ಸಂವಹನ ಕ್ರಿಯೆ ಎಂಬುದು ಪ್ರಶ್ನೆಯಾಗುತ್ತದೆ. ಉದಾಹರಣೆಗಾಗಿ ಆಕ್ಸಿಜನ್, ಆಮ್ಲಜನಕ, ಪ್ರಾಣವಾಯು ಈ ಮೂರು ಪದಗಳಲ್ಲಿ ಯಾವುದು ಸೂಕ್ತವಾದ ಪದ? ಅದೇ ರೀತಿಯಾಗಿ ಇರಿಗೇಷನ್, ಹನಿ ನೀರಾವರಿ, ಜಿನುಗು ನೀರಾವರಿ ಇವುಗಳಲ್ಲಿ ಯಾವುದು ಸೂಕ್ತವಾದ ಪದ? ರಸಗೊಬ್ಬರ, ಸೀಮೆಗೊಬ್ಬರ, ರಾಸಾಯನಿಕ ಗೊಬ್ಬರ ಈ ಪದಗಳಲ್ಲಿ ಯಾವುದು ಸೂಕ್ತ? ಎಂಬ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳಬೇಕಾದರೆ ಪ್ರಮಾಣೀಕರಣಕ್ಕೆ ಮಾರು ಹೋಗಬೇಕಾಗುತ್ತದೆ. ಅಂದರೆ ಕನ್ನಡ ಪದಕೋಶ ಆಧುನೀಕರಣಕ್ಕಾಗಿ ಇಂಗ್ಲೀಷ್‌ನ್ನು ಪ್ರಮಾಣೀಕರಣಕ್ಕಾಗಿ ಸಂಸ್ಕೃತ ಭಾಷೆಯನ್ನು ಅವಲಂಬಿಸಿದೆ ಎಂಬುದು ಸ್ಪಷ್ಟವಾಗುತ್ತದೆ.

ತಂತ್ರಜ್ಞಾನದ ಬೆಳವಣಿಗೆ ಹಾಗೂ ಭಾಷಾ ಸಂಪರ್ಕದಿಂದಾಗಿ ಕನ್ನಡ ಪದಕೋಶ ಆಧುನೀಕರಣ ಪ್ರಕ್ರಿಯೆಗೆ ಒಳಗಾಗುತ್ತದೆ. ಈ ಪ್ರಕ್ರಿಯೆಗೆ ಇಂಗ್ಲೀಷ್ ಭಾಷೆ ಇಂಬು ಕೊಡುತ್ತಿದೆ. ತಂತ್ರಜ್ಞಾನದ ಬೆಳವಣಿಗೆಯಿಂದ ಒಂದೇ ಸವನೆ ಹರಿದು ಬರುವ ಸಂಗತಿ, ಮಾಹಿತಿಯನ್ನು ಕನ್ನಡದಲ್ಲಿ ಹೇಳುವ ಪ್ರಕ್ರಿಯೆ ನಡೆದಿರುವಾಗಲೇ ಹಲವಾರು ಸಮಸ್ಯೆಗಳು ಉದ್ಭವವಾಗುತ್ತವೆ. ತಂತ್ರಜ್ಞಾನವನ್ನು ಮಾಧ್ಯಮಗಳು ಕೇವಲ ಮಾಹಿತಿಯನ್ನಾಗಿ ಬಳಸುತ್ತವೆ. ಹಾಗಾಗಿ ಪದಗಳು ಬಳಕೆಗೆ ಬಂದರೂ ಅದರ ಹಿಂದಿನ ಅರ್ಥವಲಯ ಮಾತ್ರ ನಿಲುಕದೇ ಹೋಗುತ್ತದೆ. ಉದಾಹರಣೆಗೆ : 'ಕಂಪ್ಯೂಟರ್' ಎಂಬ ಪದವನ್ನೆ ಗಮನಿಸೋಣ, ಬಹುತೇಕ ಕಲಿತ ಕನ್ನಡಿಗರ ಪದಕೋಶದಲ್ಲಿ ಈ ಪದ ಸೇರಿಹೋಗಿದೆ. ಆದರೆ ಆ ವಸ್ತುವಿನ ಬಳಕೆಗಳ ಮೂಲಕ ಅದನ್ನು ಜನರು ಗ್ರಹಿಸಬಲ್ಲರೇ ಹೊರತು ವಾಸ್ತವವಾಗಿ ಆ ವಸ್ತುವಿನ ಸ್ವರೂಪವನ್ನಲ್ಲ.

ಕನ್ನಡ ಪದಕೋಶ ಇಂಗ್ಲೀಷ್ ಪದಗಳನ್ನು ಸ್ವೀಕರಿಸುವಾಗ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಈ ಸಮಸ್ಯೆಗಳಿಗೆ ಸಂಸ್ಕೃತ ಭಾಷಾ ನಿಯಮಗಳನ್ನು ಬಳಸಿಕೊಳ್ಳುವುದರ ಮೂಲಕ ಪರಿಹಾರವನ್ನು ಕಂಡುಕೊಳ್ಳುವುದು ಸಹಜವಾಗಿದೆ. ವಿವಿಧ ವಲಯಗಳಲ್ಲಿ ದಿನನಿತ್ಯ ಈ ರೀತಿಯ ಸಮಸ್ಯೆಗಳು ಎದುರಾದಾಗಲೆಲ್ಲ ಕನ್ನಡ ಅನುಸರಿಸಿದ್ದು ಇದೆ ಮಾರ್ಗವನ್ನು. ಉದಾಹರಣೆಗೆ 'ನೇಷನ್' ಎಂಬ ಇಂಗ್ಲೀಷ್ ಪದಕ್ಕೆ 'ನಾಡು' ಎಂದು ಹೇಳಿಬಿಟ್ಟರೆ ಸಾಲದು. ನೇಷನ್ ಪದದ ಸಾಧಿತ ಪದಗಳಾದ 'ನೇಷನಲ್', 'ನೇಷನಲಿಸಂ', ನೇಷನಿಸಂ' ಎಂಬ ರೂಪಗಳಿಗೆ ಬರೀ ಕನ್ನಡದ 'ನಾಡು' ಎಂದು ಹೇಳಿಬಿಟ್ಟರೆ ಸಾಕಾಗದು. ಇಂತಹ ಸಂದರ್ಭದಲ್ಲಿ ಸಂಸ್ಕೃತದ ಭಾಷಾ ನಿಯಮಗಳಿಗೆ ಮಾರುಹೋಗುವುದು ಅನಿವಾರ್ಯವಾಗುತ್ತದೆ. ಇಂತಹ ರೂಪಗಳಲ್ಲಿ ಎಷ್ಟೋ ಕನ್ನಡವೇ

ನೇರವಾಗಿ ರೂಪಿಸಿಕೊಂಡದ್ದು ಒಂದೆಡೆಯಾದರೆ, ಮತ್ತೊಂದೆಡೆ ಭಾರತೀಯ ಇತರ ಭಾಷೆಗಳಲ್ಲಿ ರೂಪಗೊಂಡು ಕನ್ನಡಕ್ಕೆ ಎರವಲು ಬಂದಿವೆ.

ಪಾರಿಭಾಷಿಕ ಪದಕೋಶ ಹಾಗೂ ಪರಿಭಾಷೆಯ ಸಮಸ್ಯೆಗೆ ಹೊಸ ಶಾಸ್ತ್ರಗಳು ಪ್ರವೇಶ ಪಡೆದ ಮೇಲೆ ಪರಿಹಾರ ಸಿಕ್ಕಂತಾಯಿತು. ಆದರೆ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಸಿಕ್ಕಿದೆ ಎನ್ನುವಂತಿಲ್ಲ. ಕೆಲವರು ಶಾಸ್ತ್ರಗಳನ್ನು ಅಗತ್ಯಬಿದ್ದಷ್ಟು ಬಳಸಿಕೊಂಡು ಉನ್ನತಸ್ತರದ ಬರವಣಿಗೆಗೆ ಇಂಗ್ಲೀಷ್‌ನ್ನು ಅವಲಂಬಿಸುತ್ತಾರೆ. ಈ ರೀತಿಯ ಅವಲಂಬನೆಗೆ ಕಾರಣ ಇಂಗ್ಲೀಷ್ ಭಾಷೆಯನ್ನು ಸಂಪರ್ಕ ಭಾಷೆಯನ್ನಾಗಿ ಸ್ವೀಕರಿಸುವುದು. ಮಿಗಿಲಾಗಿ ಭಾರತೀಯ ಭಾಷೆಗಳನ್ನು ಉನ್ನತಸ್ತರದ ಬರವಣಿಗೆಗೆ ಸೂಕ್ತವೆಂದು ಪರಿಗಣಿಸುವುದು ಸಾಧ್ಯವಿಲ್ಲದ್ದು. ಈ ಎರಡು ಪ್ರಕ್ರಿಯೆಯಿಂದಾಗಿ ಯುಕ್ತ ಪರಿಭಾಷೆ ಹಾಗು ಪಾರಿಭಾಷಿಕ ಪದಕೋಶವನ್ನು ರೂಪಿಸಿಕೊಳ್ಳುವುದು ಅವಶ್ಯಕವಾಗಿದೆ. ಇದರಿಂದಾಗಿ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳ ಬಳಕೆಯಲ್ಲಿ ಒಂದು ನಿರ್ದಿಷ್ಟ ಆಯ್ಕೆ ಕಂಡುಬರುತ್ತದೆ. ಈ ಆಯ್ಕೆಯ ಮೂಲಕ ಸಮಸ್ಯೆಗೆ ಪರಿಹಾರ ಸಿಕ್ಕುವುದು ಒಂದೆಡೆಯಾದರೆ ಮತ್ತೊಂದೆಡೆ ಭಾಷಿಕವಾಗಿ ಹೊಸ ಸಮಸ್ಯೆ ಉದ್ಭವವಾಗುತ್ತದೆ. ಕೆಲವು ಶಾಸ್ತ್ರಗಳು ನಿಧಾನವಾಗಿ ನಮ್ಮ ಸಾಂಸ್ಕೃತಿಕ ನೆನಪಿನ ಭಾಗವಾಗುತ್ತ ನಡೆದು ವಾಸ್ತವದಲ್ಲಿ ಅವು ನಿರುಪಯುಕ್ತವಾಗುತ್ತಿರುವುದು ಕಂಡುಬರುತ್ತಿದೆ.

ಉದಾಹರಣೆಗೆ : ಕುಂಬಾರಿಕೆಯ ಶಾಸ್ತ್ರ, ಮಡಿಕೆಗಳ ಜಾಗವನ್ನು ಇತರ ಲೋಹ ಸಾಮಗ್ರಿಗಳು ಹಿಡಿಯುತ್ತ ಹೋದಂತೆ ಕುಂಬಾರಿಕೆ ಮೂಲೆ ಗುಂಪಾಗಿ ಅದಕ್ಕೆ ಸಂಬಂಧಿಸಿದ ಪರಿಭಾಷೆ ಕನ್ನಡದಲ್ಲಿ ನಿರುಪಯುಕ್ತವಾಗುತ್ತ ಹೋಗುತ್ತವೆ. ಇನ್ನೂ ಕೆಲವು ಶಾಸ್ತ್ರಗಳು ತಮ್ಮ ಪಾರಂಪಾರಿಕ ಲಕ್ಷಣಗಳೊಡನೆ ಆಧುನಿಕತೆಯನ್ನು ಮೈಗೂಡಿಸಿಕೊಳ್ಳಬೇಕಾಗಿ ಬಂದಾಗ ಸಮಸ್ಯೆ ಎದುರಾಗುತ್ತವೆ. ಉದಾಹರಣೆ : ಕೃಷಿ, ಬೇಸಾಯ ನೂರಾರು ತಲೆಮಾರುಗಳಿಂದ ಜನಜೀವನದ ಭಾಗವಾಗಿ ಬೆಳೆದು ತನ್ನದೇ ಆದ ಶಾಸ್ತ್ರವನ್ನು ಹೊಂದಿದೆ. ಭಾಷೆಗೊಂದು ವ್ಯಾಕರಣವಿದೆ. ಆ ವ್ಯಾಕರಣವನ್ನು ಆಯಾ ಭಾಷೆ ಮಾತನಾಡುವ ಭಾಷಿಕ ಬಲ್ಲ. ಆತ ಆ ಭಾಷೆಯ ಯುಕ್ತ ವಾಕ್ಯ ಸರಣಿಗಳನ್ನು ರೂಪಿಸಬಲ್ಲ.

ಒಂದು ನಿರ್ದಿಷ್ಟ ಪದ ನಿರ್ದಿಷ್ಟ ವಲಯದಲ್ಲಿ ಒಂದು ಅರ್ಥದಲ್ಲಿ ಬಳಕೆಯಲ್ಲಿದ್ದರೆ, ಅದೇ ಪದ ಮತ್ತೊಂದು ವಲಯದಲ್ಲಿ ಬಳಕೆಯಲ್ಲಿರುವ ರೀತಿಯಲ್ಲೇ ಬಳಕೆಯಲ್ಲಿರಬಹುದು. ಇಲ್ಲವೆ ಮೂಲಕ್ಕಿಂತ ಬೇರೆಯಾಗಿ ಬಳಕೆಯಾಗುವ ಪ್ರಕ್ರಿಯೆಗೆ **'ಪದಕೋಶ ಪಲ್ಲಟ'** ಎಂದು ಕರೆಯುವರು. ಪತ್ರಿಕೆಗಳಲ್ಲಿ ಬಳಕೆಯಾಗುವ ಅನ್ಯಭಾಷಾ ಪದಗಳನ್ನು ಆಧಾರವಾಗಿಟ್ಟುಕೊಂಡು ಪದಕೋಶ ಪಲ್ಲಟ ಹೇಗೆ ಆಗುತ್ತದೆ ಎಂಬುದನ್ನು ಕೆಲವು ನಿದರ್ಶನಗಳ ಮೂಲಕ ಕಂಡುಕೊಳ್ಳಬಹುದು.

**ಆಸಾಮಿ** : ಮೂಲ ಅರ್ಥದಲ್ಲಿ ಹಿಂದಿಯಲ್ಲಿ ವ್ಯಕ್ತಿ ಎಂಬ ಅರ್ಥದಲ್ಲಿ ಬಳಕೆಯಾದರೆ, ಪ್ರಸ್ತುತ ಸಂದರ್ಭದಲ್ಲಿ ಮನುಷ್ಯನ ಸ್ವಭಾವವನ್ನು ಗುರುತಿಸುವ ಅಥವಾ ತಿಳಿಸುವ ನಿಟ್ಟಿನಲ್ಲಿ 'ಮನುಷ್ಯ' ಎಂಬ ಅರ್ಥದಲ್ಲಿ ಬಳಕೆಯಾಗಿದೆ. 'ಈ ಆಸಾಮಿ ಇದ್ದಾನಲ್ಲ ಒಂದು ಕ್ಷಣವೂ ನಿಂತಲ್ಲಿ ನಿಲ್ಲುವವನಲ್ಲ' (**ವಿಜಯ ಕರ್ನಾಟಕ, ಜೂ.೧**)

**ಕಛೇರಿ** : ಈ ನಾಮಪದವು ಮೂಲ ಅರ್ಥದಲ್ಲಿ ಕಾರ್ಯಾಲಯ, ಆಫೀಸು ಎಂದು ಬಳಕೆಯಾದರೆ, ಇದೇ ಪದ ಮತ್ತೊಂದು ವಲಯದಲ್ಲಿ ಅಂದರೆ ಸಂಗೀತ ಕ್ಷೇತ್ರದಲ್ಲಿ ಸಂಗೀತ ಸಭೆ (ಸಂಗೀತ ಕಛೇರಿ) ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಅದೇ ರೀತಿಯಾಗಿ ಇನ್ನೊಂದು ವಲಯದಲ್ಲಿ ಪೊಲೀಸ್ ಠಾಣೆ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಉದಾ : ಅಪರಾಧಿಯನ್ನು ಕಛೇರಿಗೆ ಹಿಡಿದುಕೊಂಡು ಹೋದರು. (**ಸಂಯುಕ್ತ ಕರ್ನಾಟಕ, ಜೂ.೩**)

**ಗ್ಯಾಸ್** : ಈ ನಾಮಪದವು ಮೂಲ ಅರ್ಥದಲ್ಲಿ ಇಂಧನ ಎಂದು ಬಳಕೆಯಾದರೆ, ಪ್ರಸ್ತುತ ಸಾಮಾಜಿಕ ಸಂದರ್ಭದಲ್ಲಿ ಮತ್ತೊಂದು ವಲಯದಲ್ಲಿ ಈ ಪದವು ಸುಳ್ಳು, ಡೂಪು ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. (**ಪ್ರಜಾವಾಣಿ, ಜೂ.೪**)

**ಚಾಕು** : ಈ ನಾಮಪದವು ಮೂಲ ಅರ್ಥದಲ್ಲಿ ಕೊಯ್ಯುವ ಸಾಧನ ಎಂದು ಬಳಕೆಯಾದರೆ, ಇತ್ತೀಚಿನ ದಿನಮಾನಗಳಲ್ಲಿ ಈ ಪದವು ಇನ್ನೊಂದು ವಲಯದಲ್ಲಿ ವ್ಯಕ್ತಿಯ ದೈಹಿಕ ಸ್ವರೂಪವನ್ನು ಸೂಚಿಸುವ ಪದವಾಗಿ ಬಳಕೆಯಾಗುತ್ತದೆ. ಉದಾ : ಆ ವ್ಯಕ್ತಿ ನೋಡಲಿಕ್ಕೆ ಚಾಕುವಿನಂತಿದ್ದಾನೆ. (ತೆಳ್ಳಗೆ) (**ಉದಯ ಕರ್ನಾಟಕ, ಜೂ.೩**)

**ಚೇಲಾ** : ಈ ಪದವು ಮೂಲ ಅರ್ಥದಲ್ಲಿ ಹಿಂದಿಯಲ್ಲಿ ಬಲಾತ್ಕಾರವಾಗಿ ಎಳೆವಯಸ್ಸಿನಲ್ಲಿ ಮುಸಲ್ಮಾನನ್ನಾಗಿ ಮಾಡಲ್ಪಟ್ಟವನು ಎಂಬ ಅರ್ಥದಲ್ಲಿ ಬಳಕೆಯಲ್ಲಿದ್ದರೆ, ಈಗ ಈ ಪದವು ಪ್ರಚಲಿತ ರಾಜಕೀಯ ವಿದ್ಯಮಾನಗಳ ಸ್ಥಿತಿಗತಿಯನ್ನು ತಿಳಿಸುವ ನಿಟ್ಟಿನಲ್ಲಿ 'ಸೇವಕ' ಎಂಬ ಅರ್ಥದಲ್ಲಿ ಬಳಕೆಯಾಗಿದೆ. (**ವಿಜಯ ಕರ್ನಾಟಕ, ಜೂ.೫**)

**ಚೌಕಾಸಿ** : ಈ ನಾಮಪದವು ಮೂಲ ಅರ್ಥದಲ್ಲಿ ವ್ಯಾಪಾರ, ವ್ಯವಹಾರಗಳಲ್ಲಿ ಕಡಿಮೆ ಬೆಲೆಗೆ ಕೇಳುವುದು ಎಂದು ಬಳಕೆಯಾದರೆ, ಇನ್ನೊಂದು ವಲಯದಲ್ಲಿ ಇದೇ ಪದವು ಜಿಪುಣ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಉದಾ : ಅವನು ಬಹಳ ಚೌಕಾಸಿ ಮನುಷ್ಯ. (**ಪ್ರಜಾವಾಣಿ, ಜೂ.೪**)

**ದಾಯಾದಿ:** ಈ ಗುಣಪದವು ಮೂಲಾರ್ಥದಲ್ಲಿ ಕೆಟ್ಟದ್ದನ್ನು ಬಯಸುವವ, ಶತ್ರು ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಆದರೆ ಕೆಲವೊಮ್ಮೆ ಬೇರೆ ವಲಯಗಳಲ್ಲಿ ಈ ಪದವು 'ನೆಂಟರು' (ಅಣ್ಣತಮ್ಮಂದಿರು) ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಉದಾ : 'ಜೇಡಗಳಿಗೆ ಎರಡು ಬಗೆಯ ದಾಯಾದಿ ನೆಂಟರಿದ್ದಾರೆ' **(ವಿಜಯ ಕರ್ನಾಟಕ, ಜೂ. ೨)**

**ಬಾಬು** : ಈ ನಾಮಪದವು ಮೂಲ ಅರ್ಥದಲ್ಲಿ ಮಾಮೂಲು ಎಂದು ಬಳಕೆಯಾದರೆ, ಆದರೆ ಇದೇ ಪದ ಮತ್ತೊಂದು ವಲಯದಲ್ಲಿ ತೆರಿಗೆ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಕೆಲವೊಮ್ಮೆ ಪ್ರಸ್ತುತ ಸಂದರ್ಭದಲ್ಲಿ ಚಿಕ್ಕಮಕ್ಕಳನ್ನು ಸಂಭೋದಿಸುವ ಪದವಾಗಿ ಬಳಕೆಯಾಗುತ್ತದೆ. ಉದಾ : ಇತರೆ ಬಾಬುಗಳಿಂದ ತೆರಿಗೆ ಸಂಗ್ರಹಿಸಿ ರಾಜ್ಯದ ಬೊಕ್ಕಸದ ಆದಾಯವನ್ನು ೩೫ ಸಾವಿರ ಕೋಟಿಗೆ ಏರಿಸಿದರು. **(ವಿಜಯ ಕರ್ನಾಟಕ, ಜೂ.೩)**

**ಬ್ಲೇಡ್** : ಈ ನಾಮಪದವು ಮೂಲ ಅರ್ಥದಲ್ಲಿ ತೆಳುವಾದ ಕೊಯ್ಯುವಾದ ಸಾಧನ ಎಂದು ಬಳಕೆಯಾದರೆ, ಇನ್ನೊಂದು ವಲಯದಲ್ಲಿ ಇದೇ ಪದ ವಂಚನೆ, ಮೋಸ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಉದಾ : ಈಗಿನ ಕಾಲದಲ್ಲಿ ಬ್ಲೇಡ್ ಹಾಕುವವರೇ ಹೆಚ್ಚಾಗಿದ್ದಾರೆ. ಮತ್ತೊಂದು ವಲಯದಲ್ಲಿ ಇದೇ ಪದ ಅತೀಯಾದ ಮಾತುಗಾರಿಕೆ, ತಲೆ ಕೊರೆಯುವುದು ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಉದಾ : ಮುಖ್ಯ ಅತಿಥಿ ತನ್ನ ಭಾಷಣದಲ್ಲಿ ಹೊಸ ಬ್ಲೇಡ್ ಹಾಕಿದ್ದ. **(ವಿಜಯ ಕರ್ನಾಟಕ, ಜೂ.೪)**

**ಸಲಾಂ** : ಈ ನಾಮಪದವು ಮೂಲ ಅರ್ಥದಲ್ಲಿ ಮುಸಲ್ಮಾನರಲ್ಲಿ ಕೈಯನ್ನು ಹಣೆಗೆ ತಾಗಿಸಿ ಮಾಡುವ ಗೌರವ ಪೂರ್ವಕ ನಮಸ್ಕಾರ ಎಂದು ಬಳಕೆಯಾದರೆ, ಇನ್ನೊಂದು ವಲಯದಲ್ಲಿ ಇಬ್ಬರ ವ್ಯಕ್ತಿಗಳ ಮಧ್ಯೆ ಯಾವುದೇ ರೀತಿಯ ಸಂಬಂಧವಿಲ್ಲ, ಸಂಬಂಧ ಕಡಿದುಕೊಳ್ಳುವಿಕೆ ಎಂಬ ಅರ್ಥದಲ್ಲಿ ಬಳಸಲಾಗುತ್ತದೆ. ಉದಾ : ಸಾಕಪ್ಪ ನಿನ್ನ ದಾರಿಗೆ ದೊಡ್ಡ ಸಲಾಂ. **(ಪ್ರಜಾವಾಣಿ, ಜೂ.೩)**

**ಸವಾರಿ** : ಈ ನಾಮಪದವು ಮೂಲ ಅರ್ಥದಲ್ಲಿ ಸಂಚಾರ, ತಿರುಗಾಟ ಎಂಬ ಅರ್ಥದಲ್ಲಿ ಬಳಕೆಯಾದರೆ, ಇದೇ ಪದವು ಮತ್ತೊಂದು ವಲಯದಲ್ಲಿ ದಬ್ಬಾಳಿಕೆ, ದೌರ್ಜನ್ಯ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಉದಾ : ಕನ್ನಡ ಭಾಷೆಯ ಮೇಲೆ ಇಂಗ್ಲೀಷಿನ ಸವಾರಿ ನಡೆದಿದೆ. **(ವಿಜಯ ಕರ್ನಾಟಕ, ಜೂ.೪)**

**ಸ್ಪೀಕರ್** : ಈ ನಾಮಪದವು ಮೂಲ ಅರ್ಥದಲ್ಲಿ ಸಭಾಧ್ಯಕ್ಷ ಎಂಬ ಅರ್ಥದಲ್ಲಿ ಬಳಕೆಯಾದರೆ, ಇನ್ನೊಂದು ವಲಯದಲ್ಲಿ ಇದೇ ಪದ ಭಾಷಣಕಾರ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಮತ್ತೊಂದು ವಲಯದಲ್ಲಿ ಧ್ವನಿಪೆಟ್ಟಿಗೆ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. (**ವಿಜಯ ಕರ್ನಾಟಕ, ಜೂ.೧**)

ಹೀಗೆ ಒಂದು ನಿರ್ದಿಷ್ಟ ಪದ ನಿರ್ದಿಷ್ಟ ವಲಯದಲ್ಲಿ ಒಂದು ಅರ್ಥದಲ್ಲಿ ಬಳಕೆಯಾದರೆ, ಅದೇ ಪದ ಮತ್ತೊಂದು ವಲಯದಲ್ಲಿ ಈಗಾಗಲೇ ಬಳಕೆಯಲ್ಲಿರುವ ಅರ್ಥದಲ್ಲಿಯೇ ಬಳಕೆಯಲ್ಲಿರಬಹುದು. ಇಲ್ಲವೇ ಮೂಲ ಅರ್ಥಕ್ಕಿಂತ ಭಿನ್ನವಾದ ಅರ್ಥದಲ್ಲಿ ಬಳಕೆಯಾಗುತ್ತವೆ. ಈ ರೀತಿಯಾಗಿ ಕನ್ನಡ ದಿನಪತ್ರಿಕೆಗಳಲ್ಲಿ ಬಳಕೆಯಾದ ಅನ್ಯಭಾಷಾ ಪದಗಳು ಪಲ್ಲಟವಾಗುತ್ತವೆ.



ಮಾಧ್ಯಮಗಳು ಒಂದಲ್ಲ ಒಂದು ವಿಧದಲ್ಲಿ ಭಾಷೆಯನ್ನು ಬಳಸುತ್ತವೆ. ಭಾಷೆಯ ಎರಡು ರೂಪಗಳಾದ ಮಾತು ಮತ್ತು ಬರಹಗಳನ್ನು ಬೇರೆ ಬೇರೆ ರೀತಿಯಿಂದ ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುತ್ತಿವೆ. ಶಿಕ್ಷಣ, ಆಡಳಿತ ಹಾಗೂ ಮಾಧ್ಯಮಗಳು ಭಾಷೆ ಬಳಕೆಯ ಪ್ರಮುಖ ವಲಯಗಳಾಗಿದ್ದು, ಭಾಷಾ ಬಳಕೆಯ ಪ್ರಮುಖ ಮಾಧ್ಯಮಗಳಲ್ಲಿ ಪತ್ರಿಕೆಯೂ ಒಂದಾಗಿದೆ. ಪತ್ರಿಕೆಯೂ ತನ್ನ ಜವಾಬ್ದಾರಿಯನ್ನು ನಿಭಾಯಿಸಲು ಎಲ್ಲಾ ಕ್ಷೇತ್ರಕ್ಕೆ ಸಂಬಂಧಿಸಿದ ವಿಷಯಗಳನ್ನು ಭಾಷೆಯ ಮೂಲಕವೇ ಜನರಿಗೆ ತಲುಪಿಸುತ್ತದೆ.

ಪತ್ರಿಕೆಗಳಲ್ಲಿ ಬಳಕೆಯಾಗುವ ಭಾಷೆ ಸಾಮಾನ್ಯವಾಗಿ ಶಿಷ್ಟಕನ್ನಡವಾಗಿದ್ದರೂ ಬದಲಾಗುವ ಜಗತ್ತಿಗನುಗುಣವಾಗಿ ಜಾಗತೀಕರಣ, ಉದಾರೀಕರಣ, ಖಾಸಗೀಕರಣ, ಕೈಗಾರೀಕರಣ ಹಾಗೂ ನಗರೀಕರಣಗಳ ಪ್ರಭಾವದಿಂದ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾದ ಹಿನ್ನೆಲೆಯಲ್ಲಿ ಪತ್ರಿಕಾ ಮಾಧ್ಯಮದ ಪದಕೋಶದಲ್ಲಿ ಪರಿಣಾಮಕಾರಿ ಪಲ್ಲಟ ಕಂಡು ಬಂದಿದ್ದು, ಕನ್ನಡ ಭಾಷೆಯ ಜೊತೆಗೆ ಸಂಸ್ಕೃತ, ಇಂಗ್ಲೀಷ್, ಪರ್ಸೊ, ಅರೆಬ್ಬಿಕ್, ಪಾರಸಿ, ಹಿಂದಿ ಹಾಗೂ ಮರಾಠಿ ಪದಗಳು ಬಂದು ಸೇರಿಕೊಳ್ಳುತ್ತಿವೆ. ಪತ್ರಿಕೆಗಳ ವಿವಿಧ ಕಾಲಂಗಳನ್ನು ಗಮನಿಸಿದಾಗ ಸಂಪಾದಕೀಯ ಕಾಲಂನಲ್ಲಿ ಹೆಚ್ಚಾಗಿ ಸಂಸ್ಕೃತ ಪದಗಳು ಬಳಕೆಯಾದರೆ, ಕ್ರೀಡಾ ಪುರವಣಿ, ವಾಣಿಜ್ಯ ಹಾಗೂ ವ್ಯಂಗ್ಯಚಿತ್ರ ಕಾಲಂಗಳಲ್ಲಿ ಇಂಗ್ಲೀಷ್ ಪದಗಳು ಹೆಚ್ಚಾಗಿ ಬಳಕೆಯಾಗುತ್ತಿದ್ದು, ಶೀರ್ಷಿಕೆ, ವೈಚಾರಿಕ ಲೇಖನ, ಅಂಕಣ ಹಾಗೂ ವರದಿಗಳಲ್ಲಿ ಪ್ರಮಾಣೀಕರಣದ ಕನ್ನಡ ಭಾಷೆಯೊಂದಿಗೆ ಅನ್ಯ ಭಾಷೆಯ ಪದಗಳಾದ ಹಿಂದಿ, ಮರಾಠಿ, ಅರೆಬ್ಬಿಕ್, ಪಾರಸಿ ಹಾಗೂ ಪೋರ್ಚುಗೀಸ್ ಪದಗಳು ಬಳಕೆಯಾಗುವುದು ಕಂಡು ಬರುತ್ತವೆ.

ಈ ಅನ್ಯಭಾಷೆಯ ಪದಗಳು ಪತ್ರಿಕೆಯಲ್ಲಿ ಬಳಕೆಯಾಗುವಾಗ ಅದರಲ್ಲಿಯೂ ಇಂಗ್ಲೀಷ್ ಪದಗಳನ್ನು ಗಮನಿಸಿದಾಗ ಇಂಗ್ಲೀಷ್ ಪದಗಳು ಕನ್ನಡಕ್ಕೆ ಬರುವಾಗ ವ್ಯಂಜನಾಂತ್ಯದೊಂದಿಗೆ ವಿಭಕ್ತಿ ಪ್ರತ್ಯಯ ಬಳಕೆಯಾಗುವುದು ಹಾಗೂ ನಾಮಪದಗಳೊಂದಿಗೆ ಕನ್ನಡ ಕ್ರಿಯಾ ಪದಗಳು ಬಳಕೆಯಾಗುತ್ತವೆ. ಅರೆಬ್ಬಿಕ್ ಹಿಂದಿ, ಪಾರಸಿ, ಮರಾಠಿ ಹಾಗೂ ಪೋರ್ಚುಗೀಸ್ ಪದಗಳು ಪತ್ರಿಕೆಯಲ್ಲಿ ಬಳಕೆಯಾಗುವಾಗ ಬಹುತೇಕ ಪದಗಳು ವ್ಯಂಜನಾಂತ್ಯವನ್ನು ಕಳೆದುಕೊಂಡು 'ಅ'ಕಾರಂತ್ಯ, 'ಇ'ಕಾರಂತ್ಯ, 'ಉ'ಕಾರಂತ್ಯ ಹಾಗೂ 'ಎ'ಕಾರಂತ್ಯದೊಂದಿಗೆ ಬಳಕೆಯಾದರೆ, ಇನ್ನೂ ಕೆಲವು ಪದಗಳು ದೀರ್ಘಾಕ್ಷರವನ್ನು ಕಳೆದುಕೊಂಡು ಹೃಸ್ವೀಕರಣದೊಂದಿಗೆ ಬಳಕೆಯಾಗುತ್ತವೆ. ಬಹುತೇಕ ಪದಗಳು ನಾಮಪದಗಳಾಗಿದ್ದು ಕ್ರಿಯಾಪದ ಮತ್ತು ಗುಣಪದಕ್ಕೆ ಸಂಬಂಧಿಸಿದ ಪದಗಳ ಬಳಕೆ ಕಡಿಮೆ. ಈ ಹಿನ್ನೆಲೆಯಲ್ಲಿ ಅನ್ಯ ಭಾಷಾ ಪದಗಳ ಮೂಲ, ಅರ್ಥ ಹಾಗೂ ಪ್ರಯೋಗಗಳನ್ನು ಕುರಿತು ಉದಾಹರಣೆ ಸಹಿತ ಚರ್ಚಿಸಲಾಗಿದೆ.

ನನ್ನ ಸಂಶೋಧನೆಯನ್ನು ಭಿನ್ನವಾದ ನೆಲೆಯಲ್ಲಿ ಕೈಗೊಳ್ಳಲಾಗಿದೆ. ಅಂದರೆ

ಪತ್ರಿಕೆಗಳ ವಿವಿಧ ಕಾಲಗಳಲ್ಲಿ (ಶೀರ್ಷಿಕೆ, ಕ್ರೀಡೆ, ವ್ಯಂಗ್ಯಚಿತ್ರ, ಅಂಕಣ, ವಾಣಿಜ್ಯ, ವಾಚಕರ ವಾಣಿ) ಅನ್ಯ ಭಾಷೆಯ ಪದಗಳು ಯಾವ ಯಾವ ಪತ್ರಿಕೆಗಳಲ್ಲಿ ಎಷ್ಟೆಷ್ಟು ಪ್ರಮಾಣದಲ್ಲಿ ಬಳಕೆಯಾಗಿವೆ ಮತ್ತು ಆ ಪದಗಳು ಪತ್ರಿಕೆಗಳಲ್ಲಿ ಬಳಕೆಯಾಗುವಾಗ ಯಾವ ರೀತಿಯ ಅರ್ಥಗಳೊಂದಿಗೆ ಪ್ರಯೋಗವಾಗಿವೆ ಎಂಬುದನ್ನು ಆಯಾ ಕಾಲಂಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಶೀರ್ಷಿಕೆಗಳಲ್ಲಿ ಅನ್ಯಭಾಷಾ ಪದಗಳನ್ನು ಗಮನಿಸಿದಾಗ, **ಕನ್ನಡಪ್ರಭ** ದಲ್ಲಿ ಅರೆಬ್ಬಿ, ಹಿಂದಿ, ಪಾರಸಿ ಪದಗಳು ಸಮಪ್ರಮಾಣದಲ್ಲಿ ಬಳಕೆಯಾದರೆ, ಮರಾಠಿ ಪದಗಳು ಹೆಚ್ಚು ಬಳಕೆಯಾಗಿದ್ದು, ಶೇ.೩೫ ರಷ್ಟು ಇಂಗ್ಲೀಷ್ ಪದಗಳು ಬಳಕೆಯಾಗಿವೆ. **ಪ್ರಜಾವಾಣಿ** ಯಲ್ಲಿ ಅರೆಬ್ಬಿ, ಹಿಂದಿ, ಮರಾಠಿ ಪದಗಳು ಸಮಪ್ರಮಾಣದಲ್ಲಿ ಬಳಕೆಯಾದರೆ, ಪಾರಸಿ ಪದಗಳು ಹೆಚ್ಚಾಗಿ ಬಳಕೆಯಾಗಿದ್ದು, ಶೇ.೧೨ ರಷ್ಟು ಇಂಗ್ಲೀಷ್ ಪದಗಳು ಬಳಕೆಯಾಗಿವೆ. **ಉದಯವಾಣಿ** ಯಲ್ಲಿ ಪಾರಸಿ, ಹಿಂದಿ ಪದಗಳು ಕಡಿಮೆ ಪ್ರಮಾಣದಲ್ಲಿ ಬಳಕೆಯಾದರೆ, ಮರಾಠಿ ಮತ್ತು ಅರೆಬ್ಬಿಕ್ ಪದಗಳು ಹೆಚ್ಚು ಕಂಡು ಬಂದಿದ್ದು, ಇಂಗ್ಲೀಷ್ ಪದಗಳು ಶೇ.೫೫ ರಷ್ಟು ಬಳಕೆಯಾಗಿವೆ. **ವಿಜಯ ಕರ್ನಾಟಕ** ದಲ್ಲಿ ಅರೆಬ್ಬಿಕ್ ಮರಾಠಿ ಹಾಗೂ ಪಾರಸಿ ಪದಗಳು ಹೆಚ್ಚಿನ ಪ್ರಮಾಣದಲ್ಲಿ ಬಳಕೆಯಾದರೆ ಹಿಂದಿ ಪದಗಳ ಬಳಕೆ ಕಡಿಮೆಯಾಗಿದ್ದು, ಶೇ. ೫೫ ರಷ್ಟು ಇಂಗ್ಲೀಷ್ ಪದಗಳು ಬಳಕೆಯಾಗಿರುವುದು ಕಂಡು ಬಂದಿದೆ. **ಸಂಯುಕ್ತ ಕರ್ನಾಟಕ** ದಲ್ಲಿ ಅರೆಬ್ಬಿ, ಮರಾಠಿ ಹಾಗೂ ಹಿಂದಿ ಪದಗಳು ಸಮ ಪ್ರಮಾಣದಲ್ಲಿ ಬಳಕೆಯಾದರೆ, ಪಾರಸಿ ಪದಗಳ ಬಳಕೆ ಕಡಿಮೆಯಾಗಿದ್ದು, ಶೇ. ೪೮ ರಷ್ಟು ಇಂಗ್ಲೀಷ್ ಪದಗಳು ಬಳಕೆಯಾಗುತ್ತವೆ.

ಅಂಕಣ ಕಾಲಂನಲ್ಲಿ ಅನ್ಯಭಾಷಾ ಪದಗಳನ್ನು ಅಧ್ಯಯನ ಮಾಡಿದಾಗ, **ವಿಜಯ ಕರ್ನಾಟಕ** ದಲ್ಲಿ ಪಾರಸಿ, ಹಿಂದಿ ಹಾಗೂ ಮರಾಠಿ ಪದಗಳು ಸಮಪ್ರಮಾಣದಲ್ಲಿ ಬಳಕೆಯಾಗಿದ್ದು, ಅರೆಬ್ಬಿಕ್ ಪದಗಳು ಕಡಿಮೆ. ಶೇ. ೪೫ ರಷ್ಟು ಇಂಗ್ಲೀಷ್ ಪದಗಳು ಬಳಕೆಯಾಗಿವೆ. **ಸಂಯುಕ್ತ ಕರ್ನಾಟಕ** ದಲ್ಲಿ ಅರೆಬ್ಬಿಕ್ ಹಾಗೂ ಮರಾಠಿ ಪದಗಳ ಬಳಕೆ ಹೆಚ್ಚಾಗಿದ್ದು, ಹಿಂದಿ ಮತ್ತು ಪಾರಸಿ ಪದಗಳು ಕಡಿಮೆ ಬಳಕೆಯಾಗಿವೆ. ಇಂಗ್ಲೀಷ್ ಪದಗಳು ಶೇ.೬೫ ರಷ್ಟು ಕಂಡು ಬಂದಿವೆ. **ಕನ್ನಡಪ್ರಭ** ದಲ್ಲಿ ಪಾರಸಿ ಪದಗಳ ಸಂಖ್ಯೆ ಅರೆಬ್ಬಿಕ್, ಹಿಂದಿ ಹಾಗೂ ಮರಾಠಿ ಪದಗಳ ಬಳಕೆ ಕಡಿಮೆಯಾಗಿದ್ದು, ಶೇ. ೬೫ ರಷ್ಟು ಇಂಗ್ಲೀಷ್ ಪದಗಳು ಬಳಕೆಯಾಗಿವೆ. **ಉದಯವಾಣಿ** ಯಲ್ಲಿ ಅರೆಬ್ಬಿಕ್ ಮತ್ತು ಪಾರಸಿ ಪದಗಳ ಬಳಕೆ ಹೆಚ್ಚಾಗಿದ್ದು, ಮರಾಠಿ ಮತ್ತು ಹಿಂದಿ ಪದಗಳ ಬಳಕೆ ಕಡಿಮೆಯಾಗಿದೆ. ಶೇ ೩೫ ರಷ್ಟು ಇಂಗ್ಲೀಷ್ ಪದಗಳು ಕಂಡು ಬಂದಿವೆ. **ಪ್ರಜಾವಾಣಿ** ಯಲ್ಲಿ ಅರೆಬ್ಬಿಕ್, ಮರಾಠಿ ಹಾಗೂ ಪಾರಸಿ ಪದಗಳು ಹೆಚ್ಚಾಗಿ ಬಳಕೆಯಾಗಿದ್ದು, ಹಿಂದಿ ಪದಗಳ ಬಳಕೆ ಕಡಿಮೆಯಾಗಿದೆ. ಶೇ. ೪೫ ರಷ್ಟು ಇಂಗ್ಲೀಷ್ ಪದಗಳು ಕಂಡು ಬಂದಿದ್ದು ಅಲ್ಲೊಂದು,

ಇಲ್ಲೊಂದು ಪೋರ್ಚುಗೀಸ್ ಪದಗಳು ಬಳಕೆಯಾಗಿವೆ.

ಓದುಗರ (ವಾಚಕರವಾಣಿ) ಕಾಲಂನಲ್ಲಿ ಅನ್ಯಭಾಷಾ ಪದಗಳ ಬಳಕೆಯನ್ನು ಗಮನಿಸಿದಾಗ **ಕನ್ನಡಪ್ರಭ** ದಲ್ಲಿ ಪಾರಸಿ, ಹಿಂದಿ ಪದಗಳು ಹೆಚ್ಚಾಗಿ ಬಳಕೆಯಾಗಿದ್ದು, ಅರೆಬ್ಬಿಕ್ ಹಾಗೂ ಮರಾಠಿ ಪದಗಳ ಬಳಕೆ ಕಡಿಮೆ ಎಂದು ಹೇಳಬಹುದು. ಇಂಗ್ಲೀಷ್ ಪದಗಳು ಶೇ.೪೦ ರಷ್ಟು ಬಳಕೆಯಾದದ್ದು ಕಂಡು ಬಂದಿದೆ. **ಪ್ರಜಾವಾಣಿ** ಯಲ್ಲಿ ಪರ್ಸೊ ಅರೆಬ್ಬಿಕ್ ಪದಗಳು ಹೆಚ್ಚಾಗಿ ಬಳಕೆಯಾಗಿದ್ದು, ಹಿಂದಿ, ಪಾರಸಿ ಪದಗಳು ಕಡಿಮೆ ಪ್ರಮಾಣದಲ್ಲಿ ಬಳಕೆಯಾಗಿವೆ. ಮರಾಠಿ ಪದಗಳ ಬಳಕೆ ಇನ್ನೂ ಕಡಿಮೆ. ಇಂಗ್ಲೀಷ್ ಪದಗಳ ಬಳಕೆ ಶೇ.೨೫ ರಷ್ಟು ಕಂಡು ಬಂದರೆ, **ವಿಜಯ ಕರ್ನಾಟಕ** ದಲ್ಲಿ ಅರೆಬ್ಬಿಕ್ ಪದಗಳು ಹೆಚ್ಚಾಗಿ ಕಂಡು ಬಂದಿದ್ದು, ಪಾರಸಿ, ಹಿಂದಿ ಪದಗಳ ಬಳಕೆ ಕಡಿಮೆ. ಆದರೆ ಇಂಗ್ಲೀಷ್ ಪದಗಳು ಶೇ.೪೦ ರಷ್ಟು ಬಳಕೆಯಾಗುವುದು ಕಂಡು ಬಂದಿದೆ.

ವ್ಯಂಗ್ಯಚಿತ್ರ (ಕಾರ್ಟೂನ್) ಕಾಲಂನಲ್ಲಿ ಅನ್ಯಭಾಷಾ ಪದಗಳ ಬಳಕೆಯ ಅಧ್ಯಯನ ಮಾಡಿದಾಗ ಅತಿ ಹೆಚ್ಚು ಇಂಗ್ಲೀಷ್ ಪದಗಳು ಬಳಕೆಯಾಗುತ್ತಿದ್ದು, ಅವು ಕನ್ನಡಕ್ಕೆ ಬರುವಾಗ ವ್ಯಂಜನಾಂತ್ಯವಾಗುತ್ತವೆ. ಅಲ್ಲದೆ ಅತಿಹೆಚ್ಚು ನಾಮ ಪದಗಳಾಗಿರುತ್ತವೆ. ಅಲ್ಲಲ್ಲಿ ಕ್ರಿಯಾಪದ, ಗುಣಪದಗಳು ಕಂಡು ಬರುತ್ತವೆ. ಅರೆಬ್ಬಿಕ್, ಉರ್ದು, ಮರಾಠಿ ಹಾಗೂ ಹಿಂದಿ ಪದಗಳ ಬಳಕೆ ಕಡಿಮೆ ಎಂದು ಹೇಳಬಹುದು.

ಕನ್ನಡದಿನಪತ್ರಿಕೆಯ ವಾಣಿಜ್ಯ ಪುರವಣಿಯಲ್ಲಿ ಅನ್ಯಭಾಷಾ ಪದಗಳನ್ನು ಗಮನಿಸಿದಾಗ **ಪ್ರಜಾವಾಣಿ** ಯಲ್ಲಿ ಅರೆಬ್ಬಿಕ್, ಹಿಂದಿ ಪದಗಳು ಹೆಚ್ಚಾಗಿ ಬಳಕೆಯಾಗಿದ್ದು, ಮರಾಠಿ ಮತ್ತು ಪಾರಸಿ ಪದಗಳ ಬಳಕೆ ಕಡಿಮೆಯಾಗಿದ್ದು, ಅದೇ ರೀತಿಯಾಗಿ ಇಂಗ್ಲೀಷ್‌ಗಳ ಪದಗಳ ಬಳಕೆಯು ಕಡಿಮೆ ಎಂದು ಹೇಳಬಹುದು. ಹಾಗೆಯೇ **ಸಂಯುಕ್ತ ಕರ್ನಾಟಕ** ದಲ್ಲಿ ಮರಾಠಿ ಪದಗಳು ಹೆಚ್ಚಾಗಿ ಬಳಕೆಯಾಗಿದ್ದು, ಹಿಂದಿ ಪದಗಳು ಕಡಿಮೆ ಪ್ರಮಾಣದಲ್ಲಿ ಬಳಕೆಯಾಗಿವೆ. ಶೇ.೫೦ ರಷ್ಟು ಇಂಗ್ಲೀಷ್ ಪದಗಳು ಬಳಕೆಯಾಗುವುದು ಕಂಡು ಬರುತ್ತದೆ.

ಕ್ರೀಡಾ ಪುರವಣಿಯಲ್ಲಿ ಅನ್ಯಭಾಷಾ ಪದಗಳನ್ನು ಅಧ್ಯಯನ ಮಾಡಿದಾಗ ಅತಿ ಹೆಚ್ಚು ಇಂಗ್ಲೀಷ್ ಪದಗಳು ವ್ಯಂಜನಾಂತ್ಯದೊಂದಿಗೆ, ಅತಿ ಹೆಚ್ಚು ನಾಮಪದಕ್ಕೆ ಸಂಬಂಧಿಸಿದ ಪದಗಳು ಕಂಡು ಬಂದಿವೆ.

ಪತ್ರಿಕೆಗಳಲ್ಲಿ ಬಳಕೆಯಾದ ಅನ್ಯಭಾಷಾ ಪದಗಳು ಒಂದು ನಿರ್ದಿಷ್ಟ ವಲಯದಲ್ಲಿ ಒಂದು ಅರ್ಥದಲ್ಲಿ ಬಳಕೆಯಾಗುತ್ತಿದ್ದರೆ, ಅದೇ ಪದ ಮತ್ತೊಂದು ವಲಯದಲ್ಲಿ ಈಗಾಗಲೇ ಬಳಕೆಯಲ್ಲಿರುವ ರೀತಿಯಲ್ಲಿಯೇ ಬಳಕೆಯಾಗುವುದು ಒಂದೆಡೆಯಾದರೆ, ಮತ್ತೊಂದೆಡೆ ಮೂಲಕ್ಕಿಂತ ಬೇರೆಯಾಗಿ ಬಳಕೆಯಾಗುವುದನ್ನು ನಾವು ಪದಕೋಶ

ಪಲ್ಲಟದಲ್ಲಿ ಚರ್ಚಿಸಲಾಗಿದೆ.

ಅಧ್ಯಯನದ ಇತಿಮಿತಿಯಲ್ಲಿ ಪತ್ರಿಕೆಗಳಲ್ಲಿ ಅನ್ಯಭಾಷಾ ಪದಗಳು ಯಾವ ಯಾವ ಪ್ರಮಾಣದಲ್ಲಿ ಬಳಕೆಯಾಗುತ್ತವೆ ಮತ್ತು ಮೂಲ, ಅರ್ಥ ಹಾಗೂ ಪ್ರಯೋಗದ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಬೇರೆ ಬೇರೆ ವಲಯ, ಬೇರೆ ಬೇರೆ ಮಾಧ್ಯಮಗಳಲ್ಲಿ ಅನ್ಯಭಾಷಾ ಪದಗಳು ಇದಕ್ಕಿಂತಲೂ ಭಿನ್ನವಾಗಿ ಬಳಕೆಯಾಗಬಹುದು ಎಂಬುದು ನನ್ನ ಅಭಿಪ್ರಾಯವಾಗಿದೆ.

## ಅನುಬಂಧ – ೧

## ಪರಾಮರ್ಶನ ಗ್ರಂಥಗಳು


೧. ಅಶೋಕಕುಮಾರ ರಂಜೇರಿ (ಸಂ), ೨೦೦೦, **ವಿವಿಧ ವೃತ್ತಿ ಪದಕೋಶ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಇಕ್ಬಾಲ್ ಅಹ್ಮದ್ ಕೆ.ಆರ್. (ಲೇ), ೨೦೦೩, **ಪತ್ರಿಕೋದ್ಯಮದ ಮೂಲ ತತ್ವಗಳು** ಪ್ರಿಯದರ್ಶಿನಿ ಸಾಹಿತ್ಯ ಪ್ರಕಾಶನ, ಬೆಂಗಳೂರು.

೩. ಉಮಾಪತಿ ಕೆ.ಎಸ್. (ಸಂ), ೧೯೯೯, ಏನು? ಎಲ್ಲಿ?, ರಂಜನಾ ಪ್ರಕಾಶನ, ಬೆಂಗಳೂರು.

೪. ಕೃಷ್ಣಮೂರ್ತಿ ನಾಡಿಗ (ಸಂ), ೧೯೬೯, **ಭಾರತೀಯ ಪತ್ರಿಕೋದ್ಯಮ,** ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೫. ಕೃಷ್ಣಮೂರ್ತಿ ವೈ.ಎನ್. (ಸಂ), ೧೯೮೫, **ಇದು ಸುದ್ದಿ – ಇದು ಸುದ್ದಿ,** ಅಕ್ಷರ ಪ್ರಕಾಶನ ಹೆಗ್ಗೋಡ, ಸಾಗರ.

೬. ಕಾಮತ್ ಎಂ.ವಿ. (ಲೇ), ೨೦೦೧, **ವೃತ್ತಿ ಪತ್ರಿಕೋದ್ಯಮ,** ಕರ್ನಾಟಕ ಪತ್ರಿಕಾ ಅಕಾಡೆಮಿ, ಬೆಂಗಳೂರು.

೭. ಗುಂಡಪ್ಪ ಡಿ.ವಿ. (ಸಂ), ೧೯೨೮, **ವೃತ್ತ ಪತ್ರಿಕೆ,** ಕರ್ನಾಟಕ ಪತ್ರಿಕಾ ಅಕಾಡೆಮಿ, ಬೆಂಗಳೂರು.

೮. ಗೋಪಾಲಕೃಷ್ಣ ಹೆಗಡೆ (ಸಂ), ೨೦೦೪, **ಕ್ರೀಡಾ ಪತ್ರಿಕೋದ್ಯಮ,** ಕರ್ನಾಟಕ ಮಾಧ್ಯಮ ಅಕಾಡೆಮಿ, ಬೆಂಗಳೂರು.

೯. ಚಂದ್ರಶೇಖರ ಬಿ.ಎಸ್. (ಲೇ), ೨೦೦೩, **ಸಂವಹನ ಮಾಧ್ಯಮಗಳು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ದೇವೇಂದ್ರಕುಮಾರ ಹಕಾರಿ (ಸಂ), ೧೯೮೫, **ವೃತ್ತ ಪತ್ರಿಕೆ,** ವರದಿ ಲೇಖನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೧. ನಾರಾಯಣ ಕೆ.ವಿ. (ಸಂ), ೧೯೯೯, **ಕನ್ನಡ ಭಾಷಾಭಿವೃದ್ಧಿ ಸಾಧನೆ ಮತ್ತು ಮುನ್ನೋಟ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨. ನಾರಾಯಣ ಕೆ.ವಿ. (ಸಂ), ೧೯೯೭, ದಿನದಿನ ೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ನಾರಾಯಣ ಕೆ.ವಿ. (ಸಂ), ೨೦೦೭, **ಕನ್ನಡ ಜಗತ್ತು ಅರ್ಧ ಶತಮಾನ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪. ನಾರಾಯಣ ಕೆ.ವಿ. (ಸಂ), ೧೯೯೯, **ಕೃಷಿ ಪದಕೋಶ**, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ನಾಯಕ ಡಿ.ಬಿ. (ಲೇ), ೨೦೦೩, **ಸಮೂಹ ಮಾಧ್ಯಮಗಳು ಮತ್ತು ಸಮಾಜ**, ಬಂಜಾರು ಪ್ರಕಾಶನ, ಗುಲ್ಬರ್ಗಾ.

೧೬. ಪದ್ಮಾರಾಜ ದಂಡಾವತಿ (ಸಂ), ೨೦೦೧, **ಪತ್ರಿಕಾ ಭಾಷೆ**, ಕರ್ನಾಟಕ ಮಾಧ್ಯಮ ಅಕಾಡೆಮಿ ಬೆಂಗಳೂರು.

೧೭. ಪದ್ಮಾರಾಜ ದಂಡಾವತಿ (ಸಂ), ೨೦೦೪, **ರಿಪೋರ್ಟಿಂಗ್**, ಕರ್ನಾಟಕ ಮಾಧ್ಯಮ ಅಕಾಡೆಮಿ ಬೆಂಗಳೂರು.

೧೮. ಪೂರ್ಣಿಮಾ ಟಿ.ಸಿ. (ಸಂ), ೨೦೦೩, **ಆಧುನಿಕ ಸಂವಹನ ಮಾಧ್ಯಮಗಳು ಮತ್ತು ಕನ್ನಡದ ಅಭಿವೃದ್ಧಿ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೯. ಮಹಾದೇವಯ್ಯ ಪಿ. (ಸಂ), ೨೦೦೬, **ದಿನದಿನ ೩**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ಮಹೇಶ ಸುರ್ವೆ (ಸಂ), ೨೦೦೦, **ಪತ್ರಕರ್ತರ ಕೈಪಿಡಿ**, ರುಕ್ಮಿಣಿ ಪ್ರಕಾಶನ, ಬೆಂಗಳೂರು.

೨೧. ರಾಜಶೇಖರ ಜೆ.ಎಂ. (ಸಂ), ೨೦೦೪, **ಪತ್ರಕರ್ತ ಪತ್ರಿಕೋದ್ಯಮ**, ಶಾರದಾ ಸಾಹಿತ್ಯ ಪ್ರಕಾಶನ, ಚೌಡಯ್ಯದಾನಪುರ.

೨೨. ವಿಶ್ವೇಶ್ವರಭಟ್ (ಸಂ), ೨೦೦೧, **ತಲೆಬರಹ**, ಕರ್ನಾಟಕ ಪತ್ರಿಕಾ ಅಕಾಡೆಮಿ, ಬೆಂಗಳೂರು.

೨೩. ವೆಂಕಟರಮಣಯ್ಯ ಟಿ.ಬಿ. (ಸಂ), ೧೯೮೮, **ಪತ್ರಿಕೋದ್ಯಮ ವಾಙ್ಮಯ ಸೂಚಿ**. ಕರ್ನಾಟಕ ಪತ್ರಿಕಾ ಅಕಾಡೆಮಿ, ಬೆಂಗಳೂರು.

೨೪. ವೆಂಕಟಸುಬ್ಬಯ್ಯ ಜಿ. (ಸಂ), ೧೯೯೮, **ಎರವಲು ಪದಕೋಶ**, ನವ ಕರ್ನಾಟಕ ಪಬ್ಲಿಕೇಷನ್, ಬೆಂಗಳೂರು.

೨೫. ಶಂಕರಭಟ್ ಡಿ.ಎನ್. (ಸಂ) ೧೯೯೯, **ಕನ್ನಡ ಪದಗಳ ಒಳರಚನೆ**, ಭಾಷಾ ಪ್ರಕಾಶನ, ಮೈಸೂರು.

೨೬. ಸಾಂಬಮೂರ್ತಿ (ಸಂ), ೨೦೦೧, **ದಿನದಿನ ೨**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೭. ಸಾಂಬಮೂರ್ತಿ (ಸಂ), ೨೦೦೦, **ನೇಕಾರ ವೃತ್ತಿ ಪದಕೋಶ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೮. ಹಾವನೂರು ಶ್ರೀನಿವಾಸ (ಸಂ), ೨೦೦೪, **ಕನ್ನಡ ಪತ್ರಿಕಾಸೂಚಿ**, ಪ್ರಸಾರಾಂಗ ಮೈಸೂರು, ವಿಶ್ವವಿದ್ಯಾಲಯ, ಮೈಸೂರು.

**ಸಂಶೋಧನಾ ಪ್ರಬಂಧಗಳು**

೧. ಮಂಜುಳಾ ಬಿ.ಎಸ್. ದೂರದರ್ಶನ ಜಾಹೀರಾತುಗಳು, ಒಂದು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್., ಸಂಪ್ರಬಂಧ, ೧೯೯೫, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨. ಲೀಲಾವತಿ ಎಂ.ಎನ್., ಲಾಂಗ್ವೇಜ್ ಆಫ್ ಹೆಡ್‌ಲೈನ್ಸ್ ಇನ್ ಕನ್ನಡ ಡೈಲೀಸ್, ಅಪ್ರಕಟಿತ ಪಿ.ಎಚ್‌ಡಿ. ಪ್ರಬಂಧ, ೧೯೯೬, ಮೈಸೂರು ವಿಶ್ವವಿದ್ಯಾಲಯ, ಹಂಪಿ.
೩. ಸೂಗಣ್ಣ ಕನ್ನಡದಿನಪತ್ರಿಕೆಗಳಲ್ಲಿನ ಕ್ರೀಡಾಪುಟದ ಭಾಷೆ, ಅಪ್ರಕಟಿತ ಎಂ.ಫಿಲ್. ಪ್ರಬಂಧ, ೨೦೦೭, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಅನುಬಂಧ – ೨**

ಕನ್ನಡ ದಿನಪತ್ರಿಕೆಗಳಲ್ಲಿ ಬಳಕೆಯಾದ ಅನ್ಯಭಾಷಾ ಪದಗಳ 'ಅ' ಕಾರಾದಿ ಪಟ್ಟಿ

ಅಡಚಣೆ
ಅಡ್ಡಿ
ಅಮಲು
ಅಮಾನತ್ತು
ಅರ್ಜಿ
ಅಸೋಸಿಯೇಷನ್
ಆ್ಯಸಿಡ್
ಆಯಿಲ್
ಆಸಾಮಿ
ಆಸ್ಪತ್ರೆ
ಇಂಜಿನಿಯರ್
ಇಂಟರ್‌ನೆಟ್
ಇನ್ವೆಸ್ಟ್
ಇಲಾಖೆ
ಉಸ್ತುವಾರಿ
ಎಲ್.ಪಿ.ಜಿ.
ಏರ್‌ಟೆಲ್
ಐಡಿಯಾ
ಐಷಾರಾಮಿ
ಕಛೇರಿ
ಕತಲ್
ಕದೀಮ
ಕನ್‌ಸ್ಟ್ರಕ್ಟಿವ್
ಕಬೂಲು
ಕಮಲ್
ಕರಾರುವಕ್ಕು

ಕಸರತ್ತು
ಕಸುಬು
ಕಾಗದ
ಕಾನೂನು
ಕಾನ್ವೆಂಟ್
ಕಾಮೆಂಟ್ಸ್
ಕಾಮೆಡ್-ಕೆ
ಕಾಯ್ದೆ
ಕಾರುಬಾರು
ಕಾರ್ಖಾನೆ
ಕಾರ್ಡ್
ಕಾರ್ಮಿಕ
ಕಾರ್ಮಿಕರು
ಕಾಲೇಜು
ಕಾಳಜಿ
ಕಿಮ್ಮತ್ತು
ಕಿಸಾನ್
ಕುಮ್ಮಕ್ಕು
ಕುಸ್ತಿ
ಕೂಲಿಂಗ್ ಗ್ಲಾಸ್
ಕೇರ್
ಕೋರ್ಸ್
ಕ್ಯಾಬಿನೆಟ್
ಕ್ಲಿಕ್
ಕ್ಲಿನಿಕ್
ಕ್ಲೀನರ್

ಖಜಾನೆ
ಖರೀದಿ
ಖರ್ಚು
ಖಾತರಿ
ಖಾತೆ
ಖಾದಿ
ಖಾಯಂ
ಖಾಲಿ
ಖಾಸಗಿ
ಖಿಲಾಸೆ
ಖುಷಿ
ಖೋಟಾ
ಗನ್‌ಮ್ಯಾನ್
ಗಲಾಟೆ
ಗಲ್ಲಿ
ಗಿರಕಿ
ಗುಡ್‌ವಿಲ್
ಗೆಟ್‌ಅಪ್
ಗೋದಾಮು
ಗೋಲ್‌ಮಾಲ್
ಚಂದಾ
ಚಟ
ಚಪಾತಿ
ಚಹರೆ
ಚಾಕು
ಚಾರ್ಜ್‌ಶೀಟ್

ಚಾಲಾಕಿತನ
ಚೇಲಾ
ಚೌಕಾಸಿ
ಜಂಗಿ
ಜಖಂ
ಜಪ್ತಿ
ಜಬರ್‌ದಸ್ತ್
ಜರೂರು
ಜವಾಬು
ಜವಾಬ್ದಾರಿ
ಜಾಡಿ
ಜಾಮೀನು
ಜಾಸ್ತಿ
ಜಿದ್ದಾಜಿದ್ದಿ
ಜಿಲ್ಲೆ
ಜೇಬು
ಜೈಲು
ಟಚ್
ಟಾಂಗ್
ಟಾಟಾಸ್ಕೈ
ಟಾರ್ಗೆಟ್
ಟಿಕೇಟ್
ಟೆಲ್ಲರ್ಸ್
ಟೆಸ್ಟ್‌ಮ್ಯಾಚ್
ಟ್ರಾಫಿಕ್
ಟ್ವೆಂಟಿಟ್ವೆಂಟಿ
ಠಿಕಾಣಿ
ಡಲ್

ಡಾಕ್ಟರ್
ಡಿಗ್ರಿ
ಡಿಬಾರ್
ಡಿಸ್ಟ್ರಿಕ್ಟವ್
ಡೆತ್‌ವಾರೆಂಟ್
ಡೆಮಾಕ್ರೆಟಿಕ್
ಡೊನೇಷನ್
ಡ್ರಾಪ್‌ಔಟ್
ಡ್ರಿಲ್ಲಿಂಗ್
ಡ್ರೆಸ್
ಢೋಂಗಿ
ತಂಬಾಕು
ತಕರಾರು
ತನಿಖೆ
ತಪಾಸಣೆ
ತಮಾಷೆ
ತರಕಾರಿ
ತರಹೇವಾರಿ
ತರಾಟೆ
ತಲಾಶ್
ತಾಂಡಾ
ತಾಕತು
ತಾಕೀತು
ತಾಜಾ
ತಾಲೂಕು
ತುರಾಯಿ
ದಂಗು
ದರ

ದರ್ಜೆ
ದರ್ಬಾರು
ದಾಖಲೆ
ದಾಯಾದಿ
ದಾಸ್ತಾನು
ದುಂಬಾಲು
ದುಬಾರಿ
ದುರಸ್ತಿ
ದೇಣಿಗೆ
ಧಾಂದಲೆ
ಧಾಟಿ
ನಕಲಿ
ನಕಾಶೆ
ನಾಪತ್ತೆ
ನಾಲಾ
ನಾಲೆ
ನಿಗಾ
ನೆಟ್‌ವರ್ಕ್
ನೈಸ್‌ಕಾರಿಡಾರ್
ನೋಟೀಸ್
ನೋಟು
ನೌಕರ
ನ್ಯೂಸ್‌ಪ್ರಿಂಟ್
ಪರೇಡ್
ಪಲ್ಟಿ
ಪವರ್
ಪವರ್‌ಚೈನ್
ಪಹರೆ

ಪಾರ್ಲಿಮೆಂಟ್
ಪಾವತಿ
ಪಿತೂರಿ
ಪೆಟ್ರೋಲ್
ಪೇಪರ್
ಪೈಕಿ
ಪೊಲಿಟಿಷಿಯನ್
ಪೊಲೀಸ್
ಪೋರ
ಪೋಲಿಯೊ
ಪ್ಯಾಸೆಂಜರ್
ಪ್ರಾಜೆಕ್ಟ್
ಪ್ರಾಮಿಸ್
ಪ್ಲಾಪಿಯ
ಪ್ಲಾಸ್ಟಿಕ್
ಫಜೀತಿ
ಫಟಿಂಗ
ಫರ್‌ಫೆಕ್ಟ್
ಫಿನಿಕ್ಸ್
ಫಿರ್ಯಾದು
ಫೋಟೋವೊಲ್ಟಾ
ಫೋನ್
ಫೋರ್ಜರಿ
ಫ್ಯಾಷನ್
ಬಂದ್
ಬಂಪರ್
ಬಚಾವು
ಬಜೆಟ್
ಬಾಕಿ
ಬಾಬು
ಬಿಗನಿಂಗ್
ಬೇಜಾನ್
ಬೋರ್ನವಿಟಾ
ಬ್ಯಾಟರಿ
ಬ್ರೂಸಿ
ಬ್ರಾಂಡಿ
ಬ್ರೇಕ್
ಬ್ಲಾಕ್‌ಮೇಲ್
ಬ್ಲೇಡ್
ಭರ್ಜರಿ
ಮಜೂರಿ
ಮಸಲತ್ತು
ಮಾಜಿ
ಮಾಡೆಲ್
ಮಾಮೂಲು
ಮಾಹಿತಿ
ಮಿಲಿಟರಿ
ಮುತುವರ್ಜಿ
ಮುಲಾಜು
ಮೆಡಿಕಲ್
ಮೈಕ್
ಮೈನಾರಿಟಿ
ಮೊಕದ್ದಮೆ
ಮೊಬಲಗು
ಮ್ಯಾಚ್‌ಫಿಕ್ಸ್
ಯಾದಿ
ರದ್ದು
ರಫ್ತು
ರವಾನಿಸು
ರವಾನೆ
ರಸ್ತೆ
ರಹದಾರಿ
ರಾಡು
ರಿಜರ್ವ್
ರಿಟ್
ರಿಯಾಯ್ತಿ
ರಿವಾಜು
ರೀಫಾರ್ಮ್
ರೆಡಿ
ರೈಲು
ರ್‍ಯಾಲಿ
ಲಗನ್
ಲಡಾಯಿ
ಲಾ ಆ್ಯಂಡ್ ಆರ್ಡರ್
ಲಾಟರಿ
ಲಾಭಿ
ಲಾರಿ
ಲಾರ್ಡ್
ಲೂಟಿ
ವಕೀಲ
ವಜಾ
ವತನ್
ವರದಿ
ವರ್ಚಸ್ಸು

ವಸೂಲಿ
ವಹಿವಾಟು
ವಾಟರ್‌ಬಾಟಲ್
ವಾಪಾಸ್
ವಾರಸು
ವೀಡಿಯೊ
ವೆಬ್‌ಸೈಟ್
ಶಿಫಾರಸ್ಸು
ಶಿಸ್ತು
ಶೂಟೌಟ್
ಷೋಕಾಸ್
ಸಪ್ಲಿಮೆಂಟರಿ
ಸರ್ಕಸ್ಸು
ಸರ್ಕಾರ
ಸಲಾಮ್
ಸಲೀಸಾಗಿ

ಸವಲತ್ತು
ಸವಾರಿ
ಸವಾಲು
ಸಸ್ಪೆಂಡ್
ಸಾಬೀತು
ಸಾಮಾನು
ಸಿಂದಿ
ಸಿಂಪಲ್
ಸಿಪಾಯಿ
ಸಿಸ್ಟಮ್
ಸುಪರ್ದು
ಸುಸ್ತು
ಸೂಪರ್‌ಚೈಲ್ಡ್
ಸೂಪರ್‌ಸೆಲ್
ಸ್ಪೀಕರ್
ಸ್ಪೀಡ್‌ಪೋಸ್ಟ್

ಸ್ಪೋರ್ಟ್ಸ್‌ಬೈಕ್
ಸ್ಯಾಂಪಲ್
ಹಜಾರಾ
ಹಮಾಲ
ಹರಕತ್ತು
ಹರಾಜು
ಹಲ್ಲೆ
ಹಾಜರ್
ಹಾಸ್ಟೇಲ್
ಹುದ್ದೆ
ಹುನ್ನಾರ
ಹೆಲ್ಮೆಟ್
ಹೋಂವರ್ಕ್
ಹೌಸ್‌ಫುಲ್

## ಅನುಬಂಧ – ೩

### ಸಂಶೋಧನಾ ಆಕರಗಳು


೧. ಪ್ರಜಾ ವಾಣಿ ಕನ್ನಡ ದಿನಪತ್ರಿಕೆ

೨. ಕನ್ನಡ ಪ್ರಭ ಕನ್ನಡ ದಿನಪತ್ರಿಕೆ

೩. ಸಂಯುಕ್ತ ಕರ್ನಾಟಕ ಕನ್ನಡ ದಿನಪತ್ರಿಕೆ

೪. ವಿಜಯ ಕರ್ನಾಟಕ ಕನ್ನಡ ದಿನಪತ್ರಿಕೆ

೫. ಉದಯ ವಾಣಿ ಕನ್ನಡ ದಿನಪತ್ರಿಕೆ